

ಸ್ವತಂತ್ರ ಭಾರತದ, ವಿಧ್ಯಾರ್ಥಿಗಳಿಂದ ವಯೋವೃದ್ಧರ
ವರೆಗಿನ ಪ್ರತಿ ವ್ಯಕ್ತಿಯೂ ಅವಶ್ಯ ಓದಬೇಕು

---

ಮಹಾರಾಜಾ "ಪುರು"

ಅರ್ಥಾತ್

# ಸಿಕಂದರ

(ಸಂಗೀತ ನಾಟಕ)

(ಎರಡು ಅಂಕಗಳಲ್ಲಿ)

ಈ ನಾಟಕ ಆಡುವವರು ಗ್ರಂಥಕರ್ತರ ಪರವಾನಿಗೆ
ಪಡೆದುಕೊಳ್ಳಬೇಕು.

ಅಕ್ಟೋಬರ
೧೯೫೩ನೇ ಇಸ್ವಿ.

ಬೆಲೆ: ೧-೦-೦

# ನನ್ನ ಅಭಿಪ್ರಾಯ.

——§§——

ನಾಟ್ಯ ನುಡಿಯ ಪ್ರಥಮ ಸೇವೆಯೆಂದು, ಜನಮಾನ್ಯ ತರುಣ ಸಾಹಿತಿ ಶ್ರೀಮಾನ್ ಉಳವಪ್ಪಾ ಹೂಗಾರ, ಹುಬ್ಬಳ್ಳಿ. ಇವರು ಬರೆದ ನವೀನ ಕಲಾಕೃತಿಯಾದ ಸಂಗೀತ "ಸಿಕಂದರ" ನಾಟಕವನ್ನು, ಆ ಮೂಲಾಗ್ರವಾಗಿ ಆಲೋಕಿಸಿದೆ. ನಾಟಕವು ಸವಿಗನ್ನಡದ ಸರಳ ಭಾಷೆಯಲ್ಲಿ ಚಿತ್ತಾಕರ್ಷಕವಾಗಿಯೂ, ಭಾವಭರಿತವಾಗಿಯೂ, ದೋಷರಹಿತವಾಗಿಯೂ, ನಾಟ್ಯಕಲಾಭಿಮಾನಿ ಕನ್ನಡಿಗರ ಮನೋಲ್ಹಾದವನ್ನುಂಟು ಮಾಡುವದಾಗಿದೆ. ನಾಟ್ಯರಂಗದ ಕಲಾಕನ್ನಡಿಯಲ್ಲಿ ಪಡಿಮೂಡಿದ ಸಿಕಂದರನ ಐತಿಹಾಸಿಕ ಚಿತ್ರವು, ಲೇಖಕರ ಬರವಣಿಗೆಯ ಬಂಣದಿಂದ ರಂಜಿಸಿ, ನೋಟಕರ್ಕಂಣೆಳೆಯುವ ದೃಶ್ಯವಾಗಿ ಪರಿಣಮಿಸುವಲ್ಲಿ, ಯಾವ ಸಂದೇಹವಿಲ್ಲವೆಂಬುದು, ಈ ನಾಟಕದ ಬಗ್ಗೆ ನನ್ನ ಸ್ಪಷ್ಟಾಭಿಪ್ರಾಯವಾಗಿದೆ ನೂತನ ಭಾವ ಸಮರಸ ಪೂರ್ಣ ಅಚ್ಚಗನ್ನಡ ಪದ್ಯಗಳು ನಾಡನುಡಿಯ ಬಿಚ್ಚುಗನ್ನಡದಲ್ಲಿ ಜೇನು ಸವಿದಂತಿದೆ. ನಾಟಕದ ಕಥಾವಸ್ತುವು ನಾಟಕಕಾರರ ಕಲ್ಪನೆಯ ಕಡಲಿನಲ್ಲಿ ಮಥಿಸಲ್ಪಟ್ಟು ರಸವತ್ತಾದ ಬೆಂಣೆಯನ್ನು ತೆಗೆದು ಉಣ್ಣಲಿಕ್ಕೆ ಇಟ್ಟಂತಿದೆ. ಕಂಣಸನ್ನೆ ಮಾಡಿ ಕರೆಯುವ ಪ್ರಿಯತಮಳ ಮೃದುಮಂದ ಹಾಸದಂತೆ ಮನೋಜ್ಞವಾದ ಈ ನಾಟಕವು, ಸದಭಿಸ್ತುತವೆನ್ನಲು ಯಾವ ಅಭ್ಯಂತರವಿಲ್ಲ. ಈ ಹೊಸ ರೂಪವನ್ನು ನಾಟ್ಯಭೂಮಿಯಲ್ಲಿ ನಿಲ್ಲಿಸಿ, ಕನ್ನಡಿಗರ ಕಣ್ಮನಗಳಿಗೆ ಸಂತೋಷವನ್ನುಂಟು ಮಾಡಿದ ಲೇಖಕರು, ಯಶೋನ್ಮುಖರಾಗಿ ಮುನ್ನಡೆಯಲೆಂದು ನನ್ನ ಹಾರೈಕೆ !

ಪಂಡಿತ,
"ಕರ್ನಾಟಕ ಕವಿಚಂದ್ರ"
**ಶ್ರೀಕಂಠಶಾಸ್ತ್ರೀ ಅಮರಾರ್ಯ.**
**ಹಿರೇಮಠ, ನೆಲವಡಿ.**

ಹೊರಟನು. ಆದರೆ ಬಾಲಿಲೋನಾದ ಹತ್ತಿರ ತನ್ನ ೩೨ನೇ ವಯುಸ್ಸಿಗೆ ದೇಹ ಬಿಟ್ಟನು. ಅನಂತರ ಅವನ ಪ್ರೇಯುಸಿಯಾದ ರುಕ್ಸಾನಳನ್ನು ಸಿಕಂದರನ ಸೇನಾಪತಿಗಳು ಕೊಂದುಹಾಕಿದರು.

ಸಿಕಂದರನ ಗುರು ಅರಸ್ತು ಇರಾಣದ ವರೆಗೂ ಅವನೊಡನೆ ಬಂದಿದ್ದನು. ಇರಾಣದಿಂದ ಅವನು ಸ್ವದೇಶಕ್ಕೆ ಮರಳಿದನು. ಇರಾಣದಲ್ಲಿಯೇ ರುಕ್ಸಾನಳು ಸಿಕಂದರನ ಪ್ರೇಯುಸಿಯಾದದ್ದು. ರುಕ್ಸಾನಳು ಇರಾಣದ ಒಬ್ಬ ಸರದಾರನ ಮಗಳು.

ಪುರುರಾಜನು ಶೇಲಂ ರಾಜ್ಯದ ವೀರ ರಾಜನು. ಇವನು ಪರಾಕ್ರಮಿಯೂ, ನ್ಯಾಯನಿಷ್ಠುರನೂ, ಸತ್ಯಸಂಧನೂ, ಆಗಿದ್ದನು. ಆಗಿನ ಉತ್ತರ ಹಿಂದುಸ್ಥಾನದಲ್ಲಿ ಇವನನ್ನು ತಡೆಯುವವರಾರೂ ಇರಲಿಲ್ಲ ಪುರು ಅಥವಾ ಪೌರವ ಪಂಥದ ಮೂಲ ಪುರುಷನೇ ಇವನು.

ಇವನನ್ನು ಮಹಾತ್ಮರ ಮಾಲಿಕೆಯಲ್ಲಿಯೂ ಸೇರಿಸಬಹುದು. ಮಹಾ ವೀರರ ಮಾಲಿಕೆಯಲ್ಲಿಯೂ ಸೇರಿಸಬಹುದು. ಈ ಎರಡೂ ಗುಣಗಳು ಒಟ್ಟಿಗೆ ಕೂಡುವದು, ಅಸಂಭವದಲ್ಲಿ ಸಂಭವವಿದೆ. ಇಂಥ ವ್ಯಕ್ತಿತ್ವ ಗಳಿಸಿದ ಮಹಾ ವ್ಯಕ್ತಿ "ಪುರು" ಮಹಾರಾಜನು.

ಭಾರತದ ಭವ್ಯ ವ್ಯಕ್ತಿಯಾದ ಇವನು, ತನ್ನ ಮುಂದಿನ ಪೀಳಿಗೆಗಾಗಿ ಮಹಾ ತತ್ವದ ಸಂದೇಶವನ್ನೂ ಮಾರ್ಗದರ್ಶನವನ್ನೂ ಮಾಡಿರುವನು.

—‡‡—

# ೧ ನೇ ಅಂಕ.



## ದೃಶ್ಯ ೧

ಸ್ಥಳ:— ಪುರುರಾಜನ ದರ್ಬಾರ.  ವೇಳೆ:— ಸಾಯಂಕಾಲ.

(ಮಹಾರಾಜಾ ಪುರು, ಸಿಂಹಾಸನಾರೂಢನಾಗಿದ್ದಾನೆ. ರಾಜಪುತ್ರರಾದ ಕುಮಾರ ಮತ್ತು ಸಮರಸಿಂಹರು ತಮ್ಮ ತಮ್ಮ ಸ್ಥಳಗಳಲ್ಲಿ ವಿರಾಜಮಾನರಾಗಿದ್ದಾರೆ ಮುಖ್ಯಮಂತ್ರಿ ಬುದ್ಧಿಚಂದ, ಯುದ್ಧಮಂತ್ರಿ ಬಲದೇವಸಿಂಹರು ಸಹ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿರುವರು.)

**ಗುಪ್ತಚಾರ:**— ( ಬಂದು ) ರಾಜಸನ್ನಿಧಿಗೆ ! ( ಹಿಂದೂ ಪದ್ಧತಿಯಂತೆ, ಮುಜುರೆಮಾಡಿ ಸುಮ್ಮನೆ ನಿಂತುಕೊಳ್ಳುವನು.)

**ಪುರು:**— (ಕೈಎತ್ತಿ) ಜಯವಾಗಲಿ, ಸಮಾಚಾರವೇನು ಗಂಭೀರ ?

**ಗುಪ್ತಚಾರ:**— ಇರಾಣದ ಬಾದಶಹನಾದ ಸಿಕಂದರನು ಹಿಂದುಸ್ಥಾನದ ಮೇಲೆ ದಾಳಿ ಮಾಡುವ ಸಲುವಾಗಿ, ಇರಾಣದ ಗಡಿಯಲ್ಲಿ ಸೈನ್ಯ ಸಂಗ್ರಹಿಸುತ್ತಿದ್ದಾನೆ. ಬಹಳೆಂದರೆ ಇನ್ನೊಂದು ತಿಂಗಳಲ್ಲಿ ಅವನು ಹಿಂದುಸ್ಥಾನದ ಮೇಲೆ ದಾಳಿ ಮಾಡಬಹುದು.

**ಪುರು:**— ಅವನ ರಾಜ್ಯದಾಹವು ಹಿಂದುಸ್ಥಾನಕ್ಕೂ ಬಂದಿತೆ !

**ಗುಪ್ತಚಾರ:**— ಅವನ ಸೈನ್ಯ ಬೀಡು ಬಿಟ್ಟ ಸ್ಥಳದ ಮೇಲಿಂದ ವಿಚಾರ ಮಾಡಿದರೆ, ಅವನ ಮೊದಲನೇ ದಾಳಿಯು, ತಕ್ಷಶಿಲೆಯ ರಾಜ್ಯದ ಪಶ್ಚಿಮ ಗಡಿಯ ಮೇಲಾಗಬಹುದು.

**ಪುರು:**— ಈ ಸಮಾಚಾರದ ಬಗ್ಗೆ ಅಂಬಿರಾಜರ ವಿಚಾರವೇನಿದೆ, ತಿಳಿದಿದೆಯೆ ?

**ಗುಪ್ತಚಾರ:**— ಅವರಿಗೆ ಬಹುಶಃ ಈ ಸಮಾಚಾರ ತಿಳಿದಂತೆ ಕಾಣುವದಿಲ್ಲ.

**ಪುರು:**— ಈ ಬಗ್ಗೆ ತಕ್ಷಶಿಲೆಯಲ್ಲಿ ನಡೆದಿದ್ದ ಸಮಾಚಾರವನ್ನು ಸಂಗ್ರಹಿಸಿ ವರದಿ ಮಾಡು.

(ಗುಪ್ತಚಾರನು ಮುಜುರೆ ಮಾಡಿ ಹೊರಟು ಹೋಗುವನು. ಪುರುರಾಜನ ಮುಖ ಗಂಭೀರವಾಗುವದು. ಮುಖ್ಯಮಂತ್ರಿ ಬುದ್ಧಿಚಂದರ ಕಡೆಗೆ ಮುಖ ಹೊರಳಿಸಿ.)

**ಪುರು:**— ಕೇಳಿದಿರಾ, ಮಹಾಮಂತ್ರಿ! ಇದಕ್ಕೆ ನಿಮ್ಮ ವಿಚಾರವೇನು ?

**ಬುದ್ಧಿಚಂದ:**— (ನಿಟ್ಟುಸಿರುಬಿಟ್ಟು) ಈ ಸಮಸ್ಯೆ ಕಠಿಣವಾಗಬಹುದೆಂದೆನಿಸುತ್ತಿದೆ.

**ಪುರು:**— ಅದೇಕೆ ?

**ಬುದ್ಧಿಚಂದ:**— ಅಂಬಿರಾಜನು ನಮ್ಮ ವಿರೋಧಿಯಾಗಿರುವದರಿಂದ, ಅವನು ನಮ್ಮ ಸಹಾಯ ಕೇಳಲಾರನು. ಸಹಾಯ ಕೇಳದಿದ್ದರೆ, ಯುದ್ಧದಲ್ಲಿ ಅವನಿಗೆ ಸೋಲು ನಿಶ್ಚಯ. ಅವನ ಸೋಲು ಇಡೀ ಭರತ ಭೂಮಿಯ ಸೋಲಾಗುವದು.

**ಪುರು:**— ಮಹಾಮಂತ್ರಿ ! ನಿಮ್ಮ ವಿಚಾರಗಳು ಬಹುಬೆಲೆಯುಳ್ಳವುಗಳು, ನಿಮ್ಮ ಬಾಯಿಂದ ಹೊರಟ ಪ್ರತಿಶಬ್ದವೂ ಸತ್ಯತೆಯನ್ನು ತೂಗಿ ತೋರಿಸುವದು. ನಿಮ್ಮ ಅಭಿಪ್ರಾಯದಂತೆ ಅವನು ನಮ್ಮ ಸಹಾಯ ಕೇಳಲಾರನು, ಇದು ನಿಶ್ಚಯ. ನಾವಾಗಿಯೇ ಅವನಿಗೆ ಸಹಾಯ ಹಸ್ತ ಮುಂದೆ ಮಾಡಿ, ಸ್ವೀಕರಿಸೆಂದು ಕೇಳಿಕೊಳ್ಳೋಣ.

**ಅಮರ:**— (ತಟ್ಟನೆ ಎದ್ದುನಿಂತು) ಮಹಾರಾಜ ! ಹಾಗೆ ಮಾಡಿದಲ್ಲಿ ನಾವು, ನಮ್ಮ ದುರ್ಬಲತೆಯನ್ನು ತೋರಿಸಿದಂತಾಗುವದು.

**ಪುರು:**- ಮಗು, ಇದು ನಮ್ಮ ದುರ್ಬಲತೆಯಲ್ಲ, ಈ ಕೃತಿಯಿಂದ ನಾವು ದುರ್ಬಲರಿಗೆ ದುರ್ಬಲರಾಗಿ ಕಾಣಿಸಬಹುದು ಆದರೆ... ಶೂರರು ನಮ್ಮನ್ನು ಶೂರರೆಂದೇ ಕರೆಯುವರು. ಅಂಬಿರಾಜನು ನಮ್ಮ ವೈರಿಯಾಗಿದ್ದರೂ, ಸಿಕಂದರನು ಇಡೀ ಭರತಖಂಡದ ವೈರಿಯಾಗಿದ್ದಾನೆ. ಭರತ ಭೂಮಿಗೆ ಬಂದ ಆಪತ್ತನ್ನು ಎದುರಿಸಲು, ನಮ್ಮ ನಮ್ಮಲ್ಲಿಯ ವಿರೋಧವನ್ನು ಬದಿಗಿಡಬೇಕು. (ಮಹಾಮಂತ್ರಿಯ ಕಡೆಗೆ ಹೊರಳಿ) ಮಹಾಮಂತ್ರಿಜೀ ! ಅಂಭಿರಾಜ ಮೊದಲಾದ

ಮಿತ್ರರಾಜರೆಲ್ಲರಿಗೂ ಒಂದೊಂದು ಪರಿಪತ್ರವನ್ನು ಹೀಗೆ ಬರೆಯಿ ಸಿರಿ.

ಸಿಕಂದರನು ಹಿಂದುಸ್ತಾನದ ಮೇಲೆ ದಾಳಿ ಮಾಡಲಿರುವದರಿಂದ, ಹಿಂದುಸ್ತಾನದ ರಾಜರಾದ ನಾವೆಲ್ಲರೂ, ನಮ್ಮ ನಮ್ಮಲ್ಲಿಯ ವಿರೋಧ ವನ್ನು ಬದಿಗಿಟ್ಟು, ಒಕ್ಕಟ್ಟಿನಿಂದ ಆತನನ್ನೆದುರಿಸಬೇಕಾಗಿದೆ. ಆದ್ದರಿಂದ ನಮ್ಮ ನಮ್ಮಲ್ಲಿ ಮಿತ್ರತ್ವವನ್ನು ಪ್ರಸ್ಥಾಪಿಸಲು ನಾವೆಲ್ಲರೂ ಒಂದು ಗೂಡುವದು ಅವಶ್ಯವಿದೆ.



## ದೃಶ್ಯ ೨

ಸ್ಥಳ.- ಸಿಕಂದರನ ಸೈನ್ಯ ಠಾಣೆ.

( ಗುರು ಅರಸ್ತು ಶೆಲ್ಯುಕಸ ಮತ್ತು ಪಾಟಿಗೋನೀಸ ಇವರು ಪರಸ್ಪರ ಮಾತನಾಡುತ್ತ ಅಲ್ಲಿಗೆ ಬರುತ್ತಾರೆ. ಅರಸ್ತು ಮುಂದೆ ಮುಂದೆ ಬರುವನು, ಉಳಿದವರು ಆತನ ಹಿಂದೆ ಇರುವರು. ಅರಸ್ತು ಸಿಟ್ಟಿನಲ್ಲಿರು ವನು ಪಡದೆಯ ಹಿಂದೆ "ಅರಸ್ತು ಜಿಂದಾಬಾದ ಎಂಬ ಶಬ್ದವಾಗುವದು".)

**ಅರಸ್ತು:**— ( ತಿರುಗಿ ) ಶೆಲ್ಯುಕಸ ! ಈ ಹೊತ್ತು ನಾನು ಉಪನ್ಯಾಸ ಮಾಡುವದಿಲ್ಲ. ನಿನ್ನ ಸೈನಿಕರಿಗೆ ತಿಳಿಸಿಬಿಡು.

**ಶೆಲ್ಯುಕಸ:**— ಗುರುವರ್ಯ, ಸೈನಿಕರು ನಿರಪರಾಧಿಗಳು ! ನಿಂಮ ಅಮೋಘ ಉಪನ್ಯಾಸ ಕೇಳಲು ಹೊತ್ತಿಗೆ ಮೊದಲು ಹಾಜರಾಗಿ ದ್ದಾರೆ

( ಪಡದೆಯ ಹಿಂದೆ "ಅರಸ್ತು ಜಿಂದಾಬಾದ" ಎಂಬ ಶಬ್ದ ವಾಗುವದು. )

**ಅರಸ್ತು:**— ಸಿಕಂದರನು ಬಂದಿಲ್ಲವೆ ? ಹಾಗಾದರೆ ಈ ಹೊತ್ತು ಹೇಳ ಬೇಕಾದ ಉಪನ್ಯಾಸವು ಸೈನಿಕರಿಗಲ್ಲ; ಸಿಕಂದರನಿಗೆ. ಅವನನ್ನು ಕರೆತನ್ನಿರಿ, ಅಂದರೆ ನೀವು ಕೇಳುವಿರಿ. ( ಶೆಲ್ಯುಕಸನು ತಲೆತಗ್ಗಿಸಿ ನಿಲ್ಲುವನು.)

**ಅರಸ್ತು:**— ಸಿಕಂದರನಿಗೆ, ನಮ್ಮ ಉಪನ್ಯಾಸ ಕೇಳಲಿಕ್ಕೆ ಸಮಯವಿಲ್ಲ ದಷ್ಟು, ಕೆಲಸವಾದರೂ ಏನಿರುವದು ?

**ಶೆಲುಕ್ಯಸ:—** ಚಕ್ರವರ್ತಿಯು ಆ ಬಗ್ಗೆ ನನ್ನೊಡನೆ ಯಾವ ವಿಷಯು ವನ್ನೂ ಚರ್ಚಿಸಿಲ್ಲ.

**ಅರಸ್ತು:—** ( ಯಮುನೀಸನನ್ನು ಕುರಿತು ) ಯಮುನೀಸ ! ನಿಮಗೇನಾ ದರೂ ಗೊತ್ತಿರುವದೋ ?

**ಯಮುನೀಸ:—** ಇಲ್ಲ, ನನಗೆ ಗೊತ್ತಿಲ್ಲ ಗುರುವರ್ಯ.

**ಅರಸ್ತು:—** ( ವಾಟಿಗೋನೇಸನ ಕಡೆಗೆ ಹೊರಳಿ ) ನಿಮಗೆ ಗೊತ್ತಿ ದೆಯೇ ?

**ವಾಟಿಗೋನೇಸ:—** ನನಗೂ ಗೊತ್ತಿಲ್ಲ ಗುರುಗಳೇ; !

**ಅರಸ್ತು:—** ಅದು ನಿಮಗೆ ಗೊತ್ತಾಗಲಾರದು. ಸಿಕಂದರನು ಯಾವ ವಿಷಯುವನ್ನೂ ನನ್ನಿಂದ ಮುಚ್ಚಿಡಲು ಹೇಗೆ ಸಾಧ್ಯವಿಲ್ಲವೋ, ಹಾಗೆ ಇದನ್ನೂ ಮುಚ್ಚಿಡಲು ಸಾಧ್ಯವಿಲ್ಲ. ಸಿಕಂದರನು ಯಾವಾಗ ಏನು ಮಾಡುವನೆಂಬುದನ್ನು ಕೂಡಾ, ನಾನು ತಿಳಿಯಬಲ್ಲೆ. ಯಾಕಂದರೆ ಅವನನ್ನು ಅವನ ದೃಷ್ಟಿಯಲ್ಲಿಯೇ ನಾನು ನೋಡುತ್ತೇನೆ. ಈಗ ಮನೆಯಲ್ಲಿರುವನೆಂಬುದು ಕೂಡಾ, ನನಗೆ ಗೊತ್ತಿದೆ. ನಾನೀಗ ಅಲ್ಲಿಗೆ ಹೋಗುವೆನು. ನಾನು ಇಂದು ಹೇಳಬೇಕಾಗಿದ್ದ ಉಪನ್ಯಾ ಸವನ್ನು ಅವನಿಗೆ ಹೇಳುವೆನು. ನೀವು ಹೋಗಿರಿ; ಇಂದಿನ ಕಾರ್ಯ ಕ್ರಮದಲ್ಲಿ ನಾನು ಭಾಗ ವಹಿಸುವದಿಲ್ಲೆಂದು ನಿಮ್ಮ ಸೈನಿಕರಿಗೆ ತಿಳಿಸಿರಿ. ಆದರೆ........ "ಸಿಕಂದರನು, ಜಗತ್ತಿನ ಮಹತ್ವಪೂರ್ಣ ಮುಖ್ಯ ವಸ್ತುಗಳವ್ಯಾಪಾರಿ, ಇದ್ದಾನೆ". ಇದು ನಿಮ್ಮ ಲಕ್ಷ್ಯದ ಲ್ಲಿರಲಿ. (ಅರಸ್ತು ಹೊರಟು ಹೋಗುವನು ಶೆಲುಕ್ಯಸ ಮತ್ತು ವಾಟಿ ಗೋನೇಸರು ನಿರಾಶರಾಗಿ ಮತ್ತೊಂದು ಕಡೆಗೆ ಹೋಗುವರು.)

—O—

## ದೃಶ್ಯ ೩

ಸ್ಥಳ:- ರುಕ್ಸಾನಳ ಅರಮನೆ. ಸಮಯ:- ಸಾಯಂಕಾಲ.

**ಸಿಕಂದರ:—** ರೆಕ್ಸನೀಜ ! ರೆಕ್ಸನೀಜ !! ( ಎಂದು ಸಿಕಂದರ ದೊಡ್ಡ ಧ್ವನಿಯಿಂದ ಕೂಗುತ್ತ ಬರುವನು. )

**ರುಕ್ಸಾನಾ:** (ಎದುರು ಒಂದು ಇರಾಣದ ಪದ್ಧತಿಯಂತೆ ಸಲಾಮುಮಾಡುತ್ತ) ನಾನು ತಮ್ಮ ಸನ್ನಿಧಿಗೊಂದು ಅರ್ಜಿಮಾಡಬಚ್ಚಿಸುತ್ತೇನೆ.

**ಸಿಕಂದರ:--** ಅದಾವದು ?

**ರುಕ್ಸಾನಾ:--** ನನ್ನ ಹೆಸರು ರೆಕ್ಸನೀಜ ಅಲ್ಲ, "ರುಕ್ಸನಾ" ಇರುತ್ತದೆ.

**ಸಿಕಂದರ:---** ನಿಜ, ಆದರೆ ಯಾರು ಯಾರೊಡನೆ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಳ್ಳುವರೋ ಅವರ ಹೆಸರುಗಳು ಇರಾಣದ ಪದ್ಧತಿಯಂತೆ ಬದಲಾಗುವವು. ಎಲ್ಲಿಯವರೆಗೆ ದೇವರ ಇಚ್ಛೆ ಇರಲಿಲ್ಲವೋ ಅಲ್ಲಿಯವರೆಗೆ ನಾನು ನಿನ್ನನ್ನು ನೋಡಿರಲಿಲ್ಲ. ಅಲ್ಲಿಯವರೆಗೆ ನೀನೂ ರುಕ್ಸಾನಳೇ ಇದ್ದಿ; ಆದರೆ ನಾನು, ನಿನ್ನನ್ನು ಪ್ರೇಮದ ಕಣ್ಣುಗಳಿಂದ ನೋಡಿ ಎಂದು ಅಪ್ಪಿಕೊಂಡೆನೋ ಅಂದೇ ನೀನು "ರುಕ್ಸಾನಳ" ಬದಲಾಗಿ "ರೆಕ್ಸನೀಜ" ಆಗಿರುತ್ತಿ.

**ರುಕ್ಸಾನಾ:—** ಅಲಂಪನಾಹ ! ನೀವೇನಿದ್ದೀರಿ ?

**ಸಿಕಂದರ:---** ನಾನು ಮೊದಲು "ಅಲೆಕ್ಸಾಂಡರ"ನಿದ್ದೆ. ಆದರೆ ಯುನಾನವು ಎಂದು ನನ್ನನ್ನು, ತನ್ನ ಬಾದಶಹನನ್ನಾಗಿ ಮಾಡಿಕೊಂಡಿತೋ ಅಂದಿನಿಂದ ನಾನು ಸಿಕಂದರನಾಗಿದ್ದೇನೆ.

**ರುಕ್ಸಾನಾ:—** ಇರಾಣದ ಈ ಕೃತಿಯಿಂದ ತಮಗೆ ನಾಚಿಕೆಯಾಗುವದಿಲ್ಲವೆ ?

**ಸಿಕಂದರ:—** ಯಾಕೆ! ಈ ನಿನ್ನ ಸೌಂದರ್ಯವು ನಿನ್ನನ್ನು ಈ ಘನತೆಗೆ ತಂದಂತೆ. ನನ್ನ ಬಾಹುಬಲಕ್ಕೆ ಮೆಚ್ಚಿದ ಯುನಾನವು ನನ್ನನ್ನು ತನ್ನ ಬಾದಶಹನನ್ನಾಗಿ ಮಾಡಿಕೊಂಡಿತು ಹೀಂತೇ ನಾನೀ ಘನತೆಗೆ ಬಂದಿರುವದು ಈಗದು ನನಗಾಗಿ ದೊಡ್ಡ ತಪ್ಪನ್ನು ಮಾಡಿದರೂ, ನಾನದನ್ನು ಆನಂದದಿಂದ ಕ್ಷಮಿಸುವೆನು.

**ರುಕ್ಸಾನಾ:—**(ಶಿರಬಗ್ಗಿಸಿ ಸಲಾಮು ಮಾಡುವಳು) ರಾಜಾಧಿ ರಾಜರಲ್ಲಿ ನನ್ನ ವಿನಯ ವಂದನೆಗಳು.

**ಸಿಕಂದರ:--** ನಿನ್ನ ಈ ರೀತಿಯು, ನನಗೆ ಹಿಡಿಸುವದಿಲ್ಲ ಮೊದಲು ನನ್ನ ಸಮೀಪಕ್ಕೆ ಬಾ, ನಿನ್ನ ಬಿಳಿಯ ಬಣ್ಣದ ಕೈಗಳನ್ನು ನನ್ನ ಕುತ್ತಿಯಲ್ಲಿ ತೊಡಿಸು, ನಿನ್ನ ಸುಂದರ ಕುಡಿನೋಟವನ್ನು ನನ್ನ ದೃಷ್ಟಿ

ಯಲ್ಲಿ ಕೂಡಿಸು ಆಗ ಮಾತ್ರ ನನ್ನ ಮನಸ್ಸಿನ ಆನಂದವು ಉದ್ರೇಗ ಗೊಂಡು, ತುಟಿಯ ಮೇಲೆ ಕುಣಿದು ನಸುನಗೆಯಲ್ಲಿ ರೂಪಗೊಳ್ಳು ವದು. ನಂಮ್ಮಿಬ್ಬರ ಯವ್ವನದ, ಸೌಂದರ್ಯದ ಸೊಬಗು ಹೊರಸೂಸುವದು. ಆನಂದವು ಅತಿರೇಕಗೊಳ್ಳುವದು ಆಗ ಮಾತ್ರ ಈ ನಿನ್ನ ವಿನಯ ವಂದನೆಗಳನ್ನು ಮೆಚ್ಚುವೆನು.

( ಸಿಕಂದರನು ರುಕ್ಸಾನಾಳತ್ತ ಮುಂದೆ ಹೋಗುವನು )

**ರುಕ್ಸಾನಾ:—** ಆದರೆ ಆಲಂಪನಾಹ !....

( ಸಿಕಂದರನು ರುಕ್ಸಾನಳ ಕೈಹಿಡಿದು ಜಗ್ಗಿ ತನ್ನ ತೋಳತೆಕ್ಕೆಯಲ್ಲಿ ತೆಗೆದುಕೊಳ್ಳುವನು. ಅವಳ ಗದ್ದ ಹಿಡಿದು ಮೇಲಕ್ಕೆತ್ತಿ ಆಕೆಯ ದೃಷ್ಟಿ ಯಲ್ಲಿ ದೃಷ್ಟಿಯನ್ನಿಟ್ಟು)

**ಸಿಕಂದರ:—** ಈಗ ನಿನ್ನ ಅಭಿನಂದನೆಗಳನ್ನು ಸಲ್ಲಿಸು, ನಾನು ಸ್ವೀಕರಿ ಸುತ್ತೇನೆ.

(ರುಕ್ಸಾನಳು, ಆತನ ದೃಷ್ಟಿಯಿಂದ ತನ್ನ ದೃಷ್ಟಿಯನ್ನು ಬದಲಿಸಿ ಆತನ ಕೈಯಿಂದ ತಪ್ಪಿಸಿಕೊಂಡು ಹೋಗಿ ಪುನಃ ಹೊರಳಿ ನಿಂತು ತನ್ನ ಸಹಜ ಹಾವಭಾವದಿಂದ ಆತನ ಮನಸ್ಸು ಕೆರಳುವಂತೆ ಮಾಡಿ, ನಸು ನಕ್ಕು)

**ರುಕ್ಸಾನಾ:—** ಸುಕ್ರಿಯಾ

**ಸಿಕಂದರ:—** (ಆಕೆಯನ್ನು ನೋಡುತ್ತಿದ್ದ ಸಿಕಂದರನು ಆನಂದಪರವಶ ನಾಗಿ) ನಿಜವಾಗಿಯೂ ಈ ನಿನ್ನ ಚೇಷ್ಟೆ ಹಾವಭಾವಗಳು ದೇವ ಲೋಕದ ಅಪ್ಸರೆಯರನ್ನು ಕೂಡಾ ಮೀರುವವು.

**ರುಕ್ಸಾನಾ:—** ನಾನು, ಸಾರ್ವಭೌಮರ ಸಲುವಾಗಿ ನನ್ನ ಕೈಯ್ಗ ಳಿಂದಲೇ ತಯಾರಿಸಿದ ಹಾರವನ್ನು ನೋಡಿ ತಾವು ನನ್ನನ್ನು, ಪ್ರಶಂಸಿಸುವಿರಾ ?

**ಸಿಕಂದರ:—** ನಿನ್ನ ಕೈಗಳನ್ನೂ, ನಿನ್ನ ಕೈಗಳಿಂದಾದ ಪ್ರತಿ ವಸ್ತು ಗಳನ್ನೂ ಸದಾ ಪ್ರಶಂಸಿಸುತ್ತೇನೆ.

**ರುಕ್ಸಾನಾ:—** ನಿಮ್ಮ ಬಾಯಿಯಿಂದಷ್ಟೇ ಅಲ್ಲ, ಕಂಣುಗಳಿಂದಲೂ ಪ್ರಶಂಸೆ ದೊರೆಯಬೇಕು. ಅರಿಯಕೆಯಾಯಿತೆ ! ಹಾಗಾದರೆ ನಾನು ಅದನ್ನು ತರಲು ಪರವಾನಿಗಿಯುಂಟಲ್ಲವೆ ?

ಸಿಕಂದರ:— (ತಲೆ ಅಲ್ಲಾಡಿಸಿ) ಇಲ್ಲ.

ರುಕ್ಸಾನಾ:— ( ನಕ್ಕು ) ತಾರುಣ್ಯವೆಂಬ ಮಹಾ ಮಲ್ಲಿಗೆ ಅರಳಿದಾಗ, ಸುವಾಸನೆ ಬೀರುವ ಹೂವುಗಳಿಂದ ತಯಾರಿಸಿದ ಹಾರವನ್ನು ಸ್ವೀಕರಿಸಬೇಕೆಂದು ನನ್ನ ವಿನಂತಿಗಳು. (ಎಂದೆನ್ನುತ್ತ ನಮಸ್ಕರಿಸಿ ಹೊರಟು ಹೋಗುವಳು.

ಸಿಕಂದರ:— (ಗೋಡೆಗೆ ತೂಗುಹಾಕಿದ ಚಿತ್ರದೆದರು ಹೋಗಿ ನಿಲ್ಲುವನು. ಆ ಚಿತ್ರವು ತಾವಿಬ್ಬರೂ ಕೂಡಿ ತೆಗೆಸಿದ ಚಿತ್ರವಿರುವದು )

ಸಿಕಂದರ: – ರುಕ್ಸಾನಾ ನೋಡು! ನಾನು ನಿನಗೆ "ರೆಕ್ಸನೀಜ" ಅಂದಿದ್ದೇನೆ. ಈಗ ನಿನಗೆ ಸಂತೋಷವಾಯಿತೆ ? "ರೆಕ್ಸನೀಜ'' ಎಷ್ಟು ಸುಂದರವಾದ ಹೆಸರಿರುವದು ನೋಡು.

( ಬಾಗಿಲಲ್ಲಿ ಬಂದ ಇರಾಣಿ ನೌಕರನ ಕಾಲಸಪ್ಪಳ ಕೇಳಿ ಹೊರಳಿ ನಿಲ್ಲುವನು.)

ಸಿಕಂದರ:— ನನಗೀಗ ಭೆಟ್ಟಿಯಾಗಲು ಯಾರು ಬಂದಿದ್ದಾರೆ? ನಾನಿಲ್ಲಿ ಯಾರಿಗೂ ಭೆಟ್ಟಿಯಾಗುವದಿಲ್ಲ.

ನೌಕರ:— (ನಮಸ್ಕರಿಸಿ) ಗುರು ಅರಸ್ತು ಬಂದಿದ್ದಾರೆ.

ಸಿಕಂದರ: – (ಆಶ್ಚರ್ಯದಿಂದ)ಗುರು ಅರಸ್ತು! (ಎಂದೆನ್ನುತ್ತ ಚಟ್ಟನೆ ಮುಂದೆ ಬರುವನು) ( ಅರಸ್ತು ಬರುವನು. ಸಿಕಂದರನು ಇರಾಣಿ ಪದ್ಧತಿಯಂತೆ ನಮಸ್ಕರಿಸುವನು.)

ಅರಸ್ತು:— ದೇವರು ನಿನಗೆ ಯಶಕೊಡಲಿ.

ಸಿಕಂದರ:— (ವೇದಿಕೆಯ ಮೇಲೆ ಕೂಡ್ರುವಂತೆ ಕೈಸನ್ನೆಯಿಂದ ಅರಸ್ತುರಿಗೆ ಹೇಳುವನು) ತಾವೇಕೆ ಶ್ರಮತೆಗೆದುಕೊಂಡಿರಿ. ನನಗೆ ಹೇಳಿ ಕಳಿಸಿದ್ದರೆ ನಾನು ಬರುತ್ತಿರಲಿಲ್ಲವೆ?

ಅರಸ್ತು:— ದೇವರು ನಿನ್ನ ಆಯುಷ್ಯ ಅಧಿಕ ಮಾಡಲಿ. ಆದರೆ ಈಗ ನಿನ್ನೊಡನೆ ಮಾತನಾಡಲು ಬಂದಿದ್ದೇನೆ. ನಿನಗೆ ಸಮಯ ವಿದೆಯೇ ?

ಸಿಕಂದರ:— ಯಾವ ದಿವಸ ಗುರುಗಳ ಸಲುವಾಗಿ ನನ್ನಲ್ಲಿ ಸಮಯವಿರುವದಿಲ್ಲವೋ,ಅಂದಿನಿಂದ ದೇವರ ಕೃಪಾದೃಷ್ಟಿಯು ಕಡಿಮೆಯಾಗುವದೆಂದು ತಿಳಿಸಿದ್ದೇನೆ

**ಅರಸ್ತು**:— ಮಗು! ಎಲ್ಲಿಯವರೆಗೆ ಹವೆಯು ಹರಿಯುವದೋ ಅಲ್ಲಿಯವರೆಗೆ ನಿನ್ನ ಕೀರ್ತಿಬೆಳಗಬೇಕಾದರೆ, **"ನಿನ್ನ ಮನಸ್ಸನ್ನು ಹೆಣ್ಣಿನ ಹಂಬಲದಿಂದ ಹೊರಗುಳಿಸಬೇಕು."**

**ಸಿಕಂದರ**:— ತಮ್ಮ ಆಜ್ಞೆಯನ್ನು ಮನಸಾ ಆಚರಿಸುವೆನು.

**ಅರಸ್ತು**:— ಆದರೆ ಕೇವಲ ಬಾಯಿಂದ ಆಡಿದರೆ ಮುಗಿಯಲಿಲ್ಲ. ನೀನು **ಜಗತ್ತನ್ನು ಗೆದೆಯಬೇಕಾಗಿದ್ದರೆ ಮೊದಲು ನಿನ್ನನ್ನು ನೀನು ಗೆದೆ. ಹೆಂಗಸು ಗಂಡಸಿನ ಉನ್ನತಿಯ ಮಾರ್ಗದಲ್ಲಿ, ಅಡ್ಡಾಗಿ ಬೆಳದಿದ್ದ ದೊಡ್ಡಬಂಡೆಗಲ್ಲು,** ಹೆಂಗಸಿನ ಸಹವಾಸದಲ್ಲಿ ಯಾರು ಸುಳಿದಾಡುವರೋ ಅವರು ತಮ್ಮ ನಾಶವನ್ನು ಕೈಮಾಡಿ ಕರೆದಂತೆ, ಸಮುದ್ರದಲ್ಲಿ ಮುಳುಗುತ್ತಿರುವ ಹಡಗದಲ್ಲಿ ನಾನಿದ್ದರೂ, ಅದನ್ನು ಮರೆತು ಭೂಮಿಯ ಮೇಲಿದ್ದೇನೆಂದು ಅನ್ನುವ ಮೂರ್ಖನಂತಾಗುವದು.

ನನ್ನ ಈ ಮಾತನ್ನು ಯಾರು ಪಾಲಿಸುವರೋ ಅವರು, ಶೂರಜನರ ಜೀವನವನ್ನು ಹೊಂದುವರು. ಯಾರು ಅಲಕ್ಷಿಸಿಸುವರೋ ಅವರು, ಕಳ್ಳರಂತೆ ಕತ್ತಲೆಯಲ್ಲಿ ಜೀವಸಾಗಿಸುವ ಹೇಡಿಗಳಾಗುವರು. ಅಂಥವರು ತಮ್ಮ ಯಾವ ಗುರಿಯನ್ನೂ ಮುಟ್ಟುವದಿಲ್ಲ, ಇದು ನಿನ್ನ ನೆನಪಿನಲ್ಲಿರಲಿ. (ಎಂದೆನ್ನುತ್ತ ಹೊರಟು ಹೋಗುವನು.)

(ಸಿಕಂದರನು ನಿದಾನವಾಗಿ ಬಂದು ಖುರ್ಚಿಯ ಮೇಲೆ ಕೂತುಕೊಳ್ಳುವನು ಅವನ ಚಿತ್ತವು ವಿಚಾರದಲ್ಲಿ ಏಕತೆಯನ್ನು ಹೊಂದಿರುವದು. ಆಗ ರುಕ್ಸಾನಳು ಕೈಯಲ್ಲಿ ಹೂಮಾಲೆಯ ತಾಟನ್ನಿಡಿದುಕೊಂಡು ಬರುವಳು. ಆನಂದದಿಂದ ನಸುನಗುತ್ತಾ)

**ರುಕ್ಸಾನಾ**:— ನನ್ನ ಈ ಸುಂದರ ಕೈಯ್ಗಳ ಕುಶಲತೆಯನ್ನು ಕಂಣೆತ್ತಿ ನೋಡಿರಿ.

**ಸಿಕಂದರ**:— (ಖುರ್ಚಿಯಿಂದ ಚಟ್ಟನೆದ್ದು ಹೋಗಿ, ಆಕೆಯ ಎರಡೂ ಬುಜಗಳ ಮೇಲೆ ಕೈಯಿಟ್ಟು) ಕ್ಷಮಿಸು ಸುಂದರಿ! ಈಗ ನನಗೊಂದು ಅವಶ್ಯದ ವಿಚಾರ ನೆನಪಾಗಿರುತ್ತದೆ (ಎಂದು ಉದಾಸೀನತೆಯಲ್ಲಿ ಹೇಳುವನು.)

(ರುಕ್ಸಾನಳು ತಾಟನ್ನು ಟೇಬಲ್ ಮೇಲಿಟ್ಟು ವಕ್ರನಡಿಗೆಯಿಂದ ಸಿಕಂದರನ ಹಿಂದೆ ಬಂದು ನಿಲ್ಲುವಳು )

**ಸಿಕಂದರಃ**— ಇಲ್ಲೀಗ ಬಹಳ ಹೊತ್ತು ನಿಲ್ಲಲಾರೆ(ಎಂದೆನ್ನುತ್ತ ಹೋಗಲು ಪ್ರಯತ್ನಿಸುವನು. ಆಗ ರುಕ್ಸಾನಳು ಅವನ ಬುಜದ ಮೇಲೆ ಕೈಯಿಟ್ಟು ಖುರ್ಚಿಯ ಮೇಲೆ ಕೂಡ್ರಿಸುವಳು.)

**ರುಕ್ಸಾನಾಃ** - ಇದೀಗ ಬಂದು ಹೋದವರಾರು ?

**ಸಿಕಂದರ:**— ಅವನ ಹೆಸರು ಕೇಳಿ ನೀನೇನು ಮಾಡುವಿ ?

**ರುಕ್ಸಾನಾ:**— ಈ ನಮ್ಮ ಪ್ರೇಮದ ಮಧ್ಯ ಬಂಡೆಗಲ್ಲನ್ನೊಗೆದವರಾರು ?

**ಸಿಕಂದರ:**— ಅವರು, ನನ್ನ ಗುರುಗಳಾದ ಅರಸ್ತು.

**ರುಕ್ಸಾನಾ:**— ಅವರು ತಮಗೆ ಏನು ಹೇಳಿದರು ?

**ಸಿಕಂದರ:**— ಮುಖ್ಯವಾಗಿ, ಈ ಎರಡು ಮಾತುಗಳನ್ನು ನೀನು ನೆನಪಿನಲ್ಲಿಟ್ಟುಕೋ, ಎಂದು ಹೇಳಿದರು.

**ರುಕ್ಸಾನಾ:**— ಅವಾವ ಮಾತುಗಳು ?

**ಸಿಕಂದರ:**— ಒಂದು, ಯಾವನು ಜಗತ್ತನ್ನೇ ಗೆದೆಯಬೇಕೆನ್ನುವನೋ ! ಅವನು ಸ್ತ್ರೀಯ ಸಹವಾಸದಿಂದ ದೂರಗುಳಿಯಬೇಕು.

**ರುಕ್ಸಾನಾ:**— ಎರಡನೆಯ ಮಾತು ?

**ಸಿಕಂದರ:**— ಸ್ತ್ರೀಯು ಪುರುಷನ ಉನ್ನತಿಯ ಮಾರ್ಗದಲ್ಲಿಯ ಒಂದು ದೊಡ್ಡ ಬಂಡೆಗಲ್ಲು.

**ರುಕ್ಸಾನಾ:**— ಅದು ಶುದ್ಧ ತಪ್ಪು

(ಸಿಕಂದರನು ನಗುವನು. ಹಿಂದೆ ನಿಂತಿದ್ದ ರುಕ್ಸಾನಳು ಮುಂದೆ ಬಂದು ಹೀಗನ್ನುವಳು.)

**ರುಕ್ಸಾನಾ:**— ಪುರುಷನಿಗೆ ಹುರುಪು ಹುಮ್ಮಸುಗಳನ್ನು ತುಂಬಬಲ್ಲ ಚೇತನಾ ಶಕ್ತಿ ಸ್ತ್ರೀಯಲ್ಲಿದೆ.ಕಾರಣ ಯಾವನು ಜಗತ್ತನ್ನೇ ಗೆದೆಯಬೇಕೆನ್ನುವನೋ; ಅವನು ಸ್ತ್ರೀಯನ್ನು ಸದಾ ತನ್ನ ಹತ್ತಿರ ಇಟ್ಟುಕೊಳ್ಳಬೇಕು. ( ಆಗ ಸಿಕಂದರನು ಚಟ್ಟನೇ ತನ್ನ ಜಾಗ ಬಿಟ್ಟು ಏಳುವನು. ರುಕ್ಸಾನಳು ಕ್ಷಣಕಾಲ ಸುಮ್ಮನಿದ್ದು ಪುನಃ ಮಾತು ಪ್ರಾರಂಭಿಸುವಳು ) ಗಂಡಸಿನ ಬಾಳಿನಲ್ಲಿ ಕತ್ತಲೆ ಕವಿದು

ಕೊಂಡಿದ್ದರೆ; ಸ್ತ್ರೀ ಬೆಳಕು ಬೀರಬಲ್ಲ ದೀಪ ಹಚ್ಚುವಳು. ಗಂಡಸು
ಬಾಳಿನಲ್ಲಿ ಬೆಳಕು ಕಾಣದೆ ಕಂಗೆಟ್ಟಿದ್ದರೆ; ಸ್ತ್ರೀ ಬೆಳಕಿನತ್ತ ಕೈಹಿ
ಡಿದು ಕರೆದೊಯ್ಯಬಲ್ಲಳು. ಕೊನೆಯದಾಗಿ ಗಂಡಸಿನ ಜೀವನವು
ಯಾವಾಗಲೂ ಅಪೂರ್ಣವಿರುವದು ಅದನ್ನು ಪೂರ್ಣಗೊಳಿಸ
ಬಲ್ಲ ವ್ಯಕ್ತಿ ಸ್ತ್ರೀಮಾತ್ರ ! ಇದು ನಿಂಮ ಲಕ್ಷ್ಯದಲ್ಲಿರಲಿ.

**ಸಿಕಂದರ:**— (ರುಕ್ಸನಾಳ ಹೆಗಲಮೇಲೆ ಕೈಯಿಟ್ಟು) ನಿನ್ನ ಬಾಯಿಂದ
ಹೊರಟ ಸುಂದರ ಶಬ್ದಗಳನ್ನು ಕೇಳಿ, ನಾನು ಸಂತೋಷಗೊಂಡೆ.

**ರುಕ್ಸಾನಾ:**— (ಸಿಕಂದರನನ್ನು ಖುರ್ಚಿಯಮೇಲೆ ಕೂಡ್ರಿಸುತ್ತ) ಹಾಗಾ
ದರೆ ನನಗೆ ಇನಾಮು ಕೊಡಿರಿ ?

**ಸಿಕಂದರ:**— ಅದಾವ ಇನಾಮು ಕೊಡಲಿ ?

**ರುಕ್ಸಾನಾ:**— (ಟೇಬಲ್ ಮೇಲಿದ್ದ ಸರಾಯಿ ತುಂಬಿದ ಜಾಂಬನ್ನು
ಎತ್ತುತ್ತ) ನಿಮ್ಮ ಗುರುವಿನ ಆ ಎರಡೂ ಮಾತುಗಳನ್ನು ಈ
ಜಾಂಬಿನಲ್ಲಿ ತುಂಬಿ ನನ್ನ ಮನೆಯಲ್ಲಿಟ್ಟುಬಿಡಿರಿ.

**ಸಿಕಂದರ:**— ( ಸರಾಯಿಯ ಜಾಂಬನ್ನು ಕೈಗೆತ್ತಿಕೊಳ್ಳುತ್ತ ) ಅದು

**ರುಕ್ಸಾನಾ:**— ಯಾಕೆ ಶಕ್ಯವಿಲ್ಲ ! ನೀವು ರಾಜರಿರುತ್ತೀರಿ. ನಿಮಗೆ
ಬೇಕಾದುದನ್ನು ಮಾಡಲು ನೀವು ಸರ್ವ ಸ್ವತಂತ್ರರಿರುತ್ತೀರಿ.

**ಸಿಕಂದರ:**- ನೀನನ್ನುವದು ನಿಜ, ಆದರೆ ... ನಾನು ಜಗತ್ತಿಗೆ ಅರಸನಾಗಿ
ರುವೆನೇ ಹೊರ್ತು, ಗುರುಗಳಿಗಲ್ಲ. ಆ ಗುರುವಿನ ಮುಂದೆ ನಾನು
ಅಜ್ಞಾನೀ ಹುಡುಗನಕಿಂತಲೂ ಅಜ್ಞಾನಿಯು ನನ್ನಂಥ ಅನೇಕ
ಸಿಕಂದರರನ್ನು ತಯಾರು ಮಾಡಬಲ್ಲ ಶಕ್ತಿ, ಆ ಗುರುವಿನಲ್ಲಿದೆ.
ಆದರೆ ನನ್ನಂಥ ಸಾವಿರಾರು ಜನ ಸಿಕಂದರರು ಕೂಡಿದರೂ ಒಬ್ಬ
ಅರಸ್ತುನನ್ನು ತಯಾರಿಸಲು ಶಕ್ಯವಿಲ್ಲ. (ಎಂದೆನ್ನುತ್ತ ಕೈಯಲ್ಲಿಯ
ಸರಾಯಿಯ ಜಾಂಬನ್ನು ಒಗೆದುಬಿಡುವನು.)

**ರುಕ್ಸಾನಾ:**— ಹಾಗಾದರೆ ಈ ನನ್ನ ಮಧುರ ಮಧು, ತಮಗೆ ಬೇಕಾಗಿಲ್ಲ
ವೆಂದಂತಾಯಿತು ?

**ಸಿಕಂದರ:—** ನೀನು, ನಿನ್ನ ಒಡೆಯನಿಗೆ ಸರಾಯಿ ಕೊಟ್ಟಿದ್ದು. ಆ ಗುರುವಿನ ಮಾತನ್ನು, ಇದರಲ್ಲಿ ಮುಚ್ಚಿ ಮುಗಿಸಿ ಬಿಡು ಎಂತಲ್ಲವೆ! ಆದರೆ ಅವರ ಮೂರನೇ ಮಾತೂ ಒಂದಿದೆ.

**ರುಕ್ಸಾನಾ:—** ಅದಾವದು ?

**ಸಿಕಂದರ:—** ಆ ಎರಡೂ ಮಾತುಗಳನ್ನು ಸಾಧಿಸಬೇಕಾದವನಲ್ಲಿ ಕಠೋರ ಕಲ್ಲೆದೆ ಇರಬೇಕು.

**ರುಕ್ಸಾನಾ:—** (ಸಿಟ್ಟಿನಿಂದ) ಎದುರಿಸಿದ ಕಲ್ಲನ್ನು ಪುಡಿ ಮಾಡಬಲ್ಲ, ಬಲಾಢ್ಯ ಉಕ್ಕಿನ ಹೃದಯ ತಮ್ಮ ದಾಸಿಯಲ್ಲಿದೆ.

**ಸಿಕಂದರ:—** (ನಸುನಗುತ್ತ) ಉಕ್ಕನ್ನು ಎದುರಿಸಿದರಲ್ಲವೆ ! ಕಲ್ಲು ಪುಡಿಯಾಗುವದು. ಬೆಂಕಿಯ ಸಮೀಪಕ್ಕೆ ಹೋದರಲ್ಲವೇ ! ಬೆಣ್ಣೆ ಕರಗುವದು.

**ರುಕ್ಸಾನಾ:—** ನಿಮ್ಮ ಗುರುಗಳು, ಸ್ತ್ರೀಯರ ಹಿರಿಮೆಯನ್ನು ಹೀಯಾಳಿಸಿ, ಸ್ತ್ರೀಯ ಪವಿತ್ರತೆಗೆ ಮಸಿ ಬಳಿದಿದ್ದಾರೆ. ಇದು ಸ್ತ್ರೀ ಸಮಾಜಕ್ಕೆ ಅಪಮಾನ ಕೊಟ್ಟಂತಾಗಿದೆ. ಸ್ತ್ರೀ ಸಮಾಜದ ಸಾಮಾನ್ಯ ಸದಸ್ಯಳಾದ ನಾನು, ಸ್ತ್ರೀ ಸಮಾಜದ ವತಿಯಿಂದ ಉತ್ತರ ಕೊಡುವೆನು. ಸ್ತ್ರೀಯ ಮುಂದೆ, ಅವನ ಹಿರಿತನ ಮತ್ತು ಬುದ್ಧಿವಂತಿಕೆಗಳು ಯಾವ ಉಪಯೋಗಕ್ಕೂ ಬರವು, ಎಂಬುದನ್ನು ತೋರಿಸಿ ಕೊಡುವೆನು.

**ಸಿಕಂದರ:—** (ನಸುನಕ್ಕು) ಸ್ತ್ರೀಯ ಸುಂದರ ಮುಖವು ಸಿಟ್ಟಿನ ಆವೇಶದಲ್ಲಿ ಇನ್ನೂ ಹೆಚ್ಚು ಸುಂದರ ಕಾಣುವದೆಂಬುದನ್ನು, ನನ್ನ ಜೀವನದಲ್ಲಿಯೇ ಪ್ರಥಮ ಸಲ ಕಂಡದ್ದು.

**ರುಕ್ಸಾನಾ:—** ಎಲ್ಲಿ ತಿಳುವಳಿಕೆ ಇದೆ, ಎಂದು ನಾವು ತಿಳಿಯುವೆವೋ; ಅಲ್ಲಿ, ತಿಳಿಗೇಡಿತನವೂ ಇರುವದು. ಎಲ್ಲಿ ಜ್ಞಾನವಿದೆ, ಎಂದು ನಾವು ತಿಳಿಯುವೆವೋ; ಅಲ್ಲಿ, ಅಜ್ಞಾನವೂ ಇರುವದು. ಅಜ್ಞಾನವೆಂಬ ಅನಂತ ಅಂಧಕಾರದಲ್ಲಿ, ಜ್ಞಾನವೆಂಬುದೊಂದು ಕೈದೀವಿಗೆ. ಈ ದೀವಿಗೆಯು ತನ್ನ ಸುತ್ತಲೂ ಬೆಳಕು ಬೀರುವದಾದರೂ ಅದರ

ಬುಡದಲ್ಲಿಯೇ ಇರುವ ಕತ್ತಲೆಯು ಅರಿವು; ಅದಕ್ಕಿರುವದಿಲ್ಲ ಹೀಗೆ ನಿಮ್ಮ ಗುರು, ಈವರೆಗೆ ಗಳಿಸಿದ ಜ್ಞಾನದೊಡನೆ ಅಜ್ಞಾನವನ್ನೂ ಗಳಿಸಿಕೊಂಡಿದ್ದಾರೆ. ಇಂಥ ಅಜ್ಞಾನವನ್ನೆಲ್ಲ ಹೊಡೆದೋಡಿಸಲು ಸ್ತ್ರೀ ದೃಷ್ಟಿಯೊಂದೇ ಸಾಕು .

**ಸಿಕಂದರ:—** ನೀನು ಹುಚ್ಚಿ ಇದ್ದೀ ! ಗುರು ಅರಸ್ತು ನೀ ತಿಳಿದಷ್ಟು ಬುದ್ಧಿಗೇಡಿ ಇಲ್ಲ.

**ರುಕ್ಸಾನಾ:—** ಎಲ್ಲಿ ಮನುಷ್ಯತ್ವವಿದೆಯೋ, ಅಲ್ಲಿ ಮಾನವತೆಯು ಸಹಜ ಮನಸ್ಸೂ ಇರುವದು.

**ಸಿಕಂದರ:—** ಅವನ ಹೃದಯದಲ್ಲಿ ನೀ ತಿಳಿದಂಥ ಮನಸ್ಸಿಲ್ಲ. ಒಂದು ವೇಳೆ ಇದ್ದಿದ್ದರೆ ಅದು ಸತ್ತಾದರೂ ಹೋಗಿರಬಹುದು

**ರುಕ್ಸಾನಾ:—** ಸತ್ತ ಮನಸ್ಸಿಗೆ ಮತ್ತೆ ಜೀವ ತುಂಬಬಲ್ಲ ಶಕ್ತಿ ಸ್ತ್ರೀಯಲ್ಲಿದೆ. ಆದರೆ ನೀವು ಇಷ್ಟು ಮಾಡಿರಿ; ನಾಳೆ ಮುಂಜಾನೆ ನಿಮ್ಮ ಗುರುಗಳ ಮನೆಯ ತೋಟದಲ್ಲಿ ಮರಿಯಾಗಿ ನಿಂತುಕೊಳ್ಳಿರಿ. ಯಾವಾಗ ಚಪ್ಪಾಳಿ ಹೊಡೆಯುವೆನೋ, ಆಗ ನೀವು ನಿಮ್ಮ ಗುರುಗಳಲ್ಲಿಗೆ ಬಂದು ಬಿಡಿರಿ. ಆಗ ನಿಮ್ಮ ಕಂಣುಗಳಿಂದಲೇ ನೀವು ನಂಬಲಾರದ ದೃಶ್ಯ ನೋಡುವಿರಿ.

**ಸಿಕಂದರ:—** ಆದರೆ, ನಿನಗೆ ಒಳಗೆ ಬಿಟ್ಟರಲ್ಲವೆ ?

**ರುಕ್ಸಾನಾ:—** ಯಾರಿಗೆ ಸಿಕಂದರನ ಹೃದಯದಲ್ಲಿ ಸ್ಥಾನ ದೊರೆತಿದೆಯೋ, ಅವರು ಎಲ್ಲಿ ಬೇಕಾದಲ್ಲಿ ಹೋಗಬಲ್ಲರು. ಅವರನ್ನು ಯಾರೂ ತಡೆಯಲಾರರು.

---

## ದೃಶ್ಯ ೧

ಸ್ಥಾನ – ಅರಸ್ತನ ನಿವಾಸಸ್ಥಾನದ ಮುಂದೆ ಇರುವ ಹೂದೋಟದ ಬಾಗಿಲ.

ವೇಳೆ:— ರಾತ್ರಿ ಸುಮಾರು ನಾಲ್ಕು ಘಂಟೆ.

(ಬಾಗಿಲದ ಎಡಬಲಗಳಲ್ಲಿ ಎರಡು ಹಿಲಾಲುಗಳು ಉರಿಯುತ್ತಿವೆ. ರೆನಿಯಾಸ ಮತ್ತು ದೇವಕುಲಿಸ ಎಂಬ ಇಬ್ಬರು ಸೈನಿಕರು ಪಹರೆ ಮಾಡುತ್ತಿದ್ದಾರೆ. ಅವರು ತಮ್ಮತಮ್ಮಲ್ಲಿ ಮಾತಾಡುತ್ತಿದ್ದಾರೆ)

**ರೆನಿಯಾಸ:**— ದೇವಕುಲಿಸ ! ನಾವು ಈ ಪರದೇಶದಲ್ಲಿ.....

**ದೇವಕುಲಿಸ:**— ಯಾರೋ, ಪರದೇಸಿ ! ನನಗ ಹೇಣತಿ ಅದಾಳ, ಮಕ್ಕಳದಾವ ...

**ರೆನಿಯಾಸ:**— ಹಾ ! (ಹೊರಳಿ ಬಂದು ದೇವಕುಲಿಸನ ಮುಂದೆನಿಂತು) ನಿನಗೆ ಹೇಣತಿ ಅದಾಳ !........

**ದೇವಕುಲಿಸ:**— ಅದಾಳ.

**ರೆನಿಯಾಸ:**— ಮಕ್ಕಳೂ ಅದಾವ !

**ದೇವಕುಲಿಸ:**— ಮೂರು ಮಕ್ಕಳು ಅದಾವ.

**ರೆನಿಯಾಸ:** (ಆಶ್ಚರ್ಯದಿಂದ ಆಲೋಚನೆ ಮಾಡುತ್ತ. ಅಲ್ಲಾ ನಾನೂ ಇವನೂ ಕೂಡಿ ಇವಾಕ ಹತ್ತಿ ಹನ್ನೆರಡು ವರ್ಷಾತು ಇವಗ ಮಕ್ಕಳಾದವು, ಯಾವಾಗ ! ಅಂತೀನಿ ಎಂದು ಗುಣಗುಡುತ್ತ) ಅಲ್ಲಪಾ ! ನೀನು ಹೇಣತಿ ಮೋತಿ ನೋಡದ ಎಷ್ಟು ದಿವಸಾತು

**ದೇವಕುಲಿಸ:**— ಹನ್ನೆರಡು ವರ್ಷಾತು.

**ರೆನಿಯಾಸ:**— ನೀನು. ಹೇಣತಿ ಬಿಟ್ಟು ಬರೂಮುಂದ ಮಕ್ಕಳಿದ್ದವು.

**ದೇವಕುಲಿಸ:**— ಏನೂ ಇಲ್ಲಾ

**ರೆನಿಯಾಸ:**— ಈಗೆಷ್ಟಾಗ್ಯಾವು.

**ದೇವಕುಲಿಸ:**— ಮೂರು ಆಗ್ಯಾವ

**ರೆನಿಯಾಸ:**— ಅವು ನಿನ್ನ ಮಕ್ಕಳ ಅನ್ನು.

**ದೇವಕುಲಿಸ:**— ಯಾಕ ! ಆಕಿ ನನ್ನ ಹೇಣ್ತಿ ಅಲ್ಲೇನು.

ರೆನಿಯಾಸ:– ಅಲ್ಲಾ ! ಅವು ನಿನಗ.... ಹುಟ್ಯಾವೇನೂ ಅಂದೆ.

ದೇವಕುಲಿಸಃ— (ಘಟ್ಟಿಯಾಗಿ ನಗುತ್ತ ರೆನಿಯಾಸನ ಕಡೆಗೆ ಕೈಮಾಡಿ) ಅಲ್ಲಾ ಎಂಥಾ ಶಾಣಾ ಅದೀ ನೀ. ಗಂಡ್ಸೂರೆಲ್ಲಾರ ಹಡಿತಾರ. ನಾ ಹಡೆದಿಲ್ಲೋ ಹುಚ್ಚಾ ! ನನ್ಹೇಣ್ತಿ ಹಡೆದಾಳ.

ರೆನಿಯಾಸಃ— ಅದಿರಲಿ, ಈಗ ಅಲ್ಲಿ ಯಾರ್ಯಾರು ಇರತಾರ.

ದೇವಕುಲಿಸಃ— ನನ್ಹೇಣತಿ, ನನ್ನ ಮಕ್ಕಳು, ಗೋನ್ಯಾ.

ರೆನಿಯಾಸಃ— ಗೋನ್ಯಾ, ಅಂದರ್ಯಾರು

ದೇವಕುಲಿಸಃ— ಯಾರೋ ಏನೋ, ನನ್ಹೇಣತಿ ಒಬ್ಬಾಕೆ ಅಗತಾಳೂ ಅಂತ ಜೋಡಿಗೆ ಕರಕೊಂಡಾಳಂತ.

(ಅಷ್ಟರಲ್ಲಿ ರುಕ್ಸಾನಳು ಬುರ್ಕಿ ಹಾಕಿಕೊಂಡು ಬಂದು, ಒಳಗೆ ಹೋಗುವದಕ್ಕಾಗಿ ಹೋಗುವಳು.)

ರೆನಿಯಾಸಃ— ಏ.... ಯಾರ್ ನೀ, ಇಲ್ಯಾಕ ಬಂದಿ, ದಾರಿ ತಪ್ಪಿಗಿಪ್ಪಿ ಯನ ನೋಡು ಅಕಡ್ಹೋಗು ಅಕಡೆ. ಇಲ್ಯಾರಿರತಾರ ಗೊತ್ತಿಲ್ಲೇನು ನಿನಗೆ ?

ರುಕ್ಸಾನಾಃ— ಯಾರಿರತಾರ ?

ರೆನಿಯಾಸ:— ಗುರು ಅರಸ್ತು ಇರತಾರ ಅರಸ್ತು. ಅಂತಿಲ್ಲ ಅಸಪಾಸ ಯಾವ ಹೆಂಗಸರೂ ಹಾಯುವಂತಿಲ್, ತಿಳಿತ ! ಹೋಗ ಅಕಡೆ ಹೋಗ್.

ರುಕ್ಸಾನಾ:— ಯಾಕ, ಹಾಯುವಂತಿಲ್ಲ ?

ರೆನಿಯಾಸ:— ಅವರ ಹುಕುಮು ಹಂಗೈತಿ ಇಷ್ಟ.... ಅಲ್ಲಾ.... ಅವರ ಮುಂದ ಹೆಂಗಸರ ಹೆಸರ ಸಹಿತ ತಗಿಯುವಂತಿಲ್ಲ. ಹೆಂಗಸರು ಅವರ ಮುಂದ ಹಾದು ಹೋದರೂ,ಅಂದರ,ಅವರಿಗೆ ಹೆಂಗ್ಯಾಂಗೋ ಅಗತೈತಂತ. ಅದಕ ಹೆಂಗಸರೂ ಅಂದರ ಬೆಂಕಿ ಕಾರತಾರ.

ರುಕ್ಸಾನಾ:— ನಾನು ಅವರಿಗೇ ಬೆಟ್ಟಿಯಾಗಲು ಬಂದಿದ್ದೇನೆ. ಸರಿ ದಾರಿಬಿಟ್ಟು ನಿಲ್ಲು,

**ದೇವಕುಲಿಸ:—** ಅಲಲಲ; ಇದೇನಪಾ, ಇನ್ನಮ್ಯಾಲಿ ಹೆಂಗಸರ ಅಧಿಕಾರ ಹೆಚ್ಚಾಗುವಂತೆ ಕಾಣತ್ತೈತಿ ಬಾದಶಹರ ಹೆಂಡಿಸ ಮಾತು ಕೇಳುವಾಗ ನಮ್ಮ ಗತಿಯೇನು. ಹೋಗಲಿ ಬಿಡಪಾ ಬಿಟ್ಟುಬಿಡು.

**ರೆನಿಯಾಸ:—** ಸುಮ್ಮಕಿರೋ ಮೂರ್ಖಾ !

**ರುಕ್ಸಾನಾ:—** ಇದು ರುಕ್ಸಾನಳ ಹುಕುಮೈತಿ. ರುಕ್ಸಾನಳ ಹುಕುಮನ್ನು ನಿಮ್ಮ ಬಾದಶಹರೇ ಮೀರಿಲ್ಲ. ದಾರಿಬಿಟ್ಟು ಸರಿದು ನಿಲ್ಲಿರಿ.

(ರೆನಿಯಾಸ ಮತ್ತು ದೇವಕುಲಿಸರು ಆಶ್ಚರ್ಯದಿಂದಲೂ ಭಯದಿಂದಲೂ ಒಬ್ಬರ ಮುಖ ಒಬ್ಬರು ನೋಡುತ್ತ ದಾರಿ ಬಿಟ್ಟು ಸರಿದು ನಿಲ್ಲುವರು )

**ರೆನಿಯಾಸ:** ಯಾರೋ ಎಂದು ತಿಳಿದು, ಮಾಡಿದ ಅಪರಾಧವನ್ನು ಕ್ಷಮಿಸಬೇಕು. (ಎಂದೆನ್ನುತ್ತ ಸಲಾಮು ಮಾಡುವನು. ಮತ್ತು ದಾರಿಬಿಟ್ಟು ಇಬ್ಬರೂ ಸರಿದು ನಿಲ್ಲುವರು.)

**ರುಕ್ಸಾನಾ:** – ನಾನು ಒಳಗಿರೂತನಕಾ ನಿಮ್ಮ ಬಾದಶಹನ ಹೊರ್ತು, ಯಾರ ಬಂದರೂ ಒಳಗೆ ಬಿಡಬೇಡಿರಿ. ತಿಳಿತ ! (ಎಂದು ಹೇಳುತ್ತ ಒಳಗೆ ಹೋಗುವಳು.)

(ಕಾವಲಗಾರರಿಬ್ಬರೂ ಭಯದಿಂದ ಸುಮ್ಮನೇ ನಿಂತುಬಿಡುವರು. ಅಷ್ಟರಲ್ಲಿ ಒಳಗಿನಿಂದ ರುಕ್ಸಾನಳು ಹಾಡುವ ಸ್ವರ ಕೇಳಬರುವದು. ಇಬ್ಬರೂ ಲಕ್ಷಗೊಟ್ಟು ಹಾಡು ಕೇಳುತ್ತ ನಿಲ್ಲುವರು.)

— ಹಾಡು —

(ಪಡದೆಯ ಹಿಂದೆ)

ಏಳ್ ಏಳ್ ಏಳ್ ।
ಎಚ್ಚರಾಗೇಳ್ ।
ತರುಣಿ ಬಂದಳೇಳ್ ।
ಏಳ್ ಏಳ್ ಏಳ್ ॥ಪಲ್ಲ॥

(ಪಡದೆ ಏಳುವದು.)

(ರುಕ್ಮಿಣಿ ಒನಪು ಒಯ್ಯಾರಗಳೊಡನೆ ಹಾಡುತ್ತ ಹೂವು ಹರಿಯುತ್ತಿದ್ದಾಳೆ)

— ಹಾಡು —

ಏಳ್ ಏಳ್ ಏಳ್
ಎಚ್ಚರಾಗೇಳ್
ತರುಣಿ ಬಂದಳೇಳ್
ಏಳ್ ಏಳ್ ಏಳ್ ||ಪಲ್ಲ||

ಕದವ ತೆರೆ ಏಳ್
ಸುಂದರಿ ಬಂದಳೇಳ್
ನೋಡ ಬಾ ಏಳ್
ನಲಿಯ ಬಾ ಏಳ್ ||೧||

(ಮಲಗಿದ ಅರಸನ್ನು ಎಚ್ಚರಾಗಿ ಹಾಡು ಕೇಳಿ ಸಂತೋಷಪಟ್ಟು ಸಾವಕಾಶವಾಗಿ ಹೊರಗೆ ಬಂದು ನಿಲ್ಲುವನು)

ನುಣ್ಣಗಾಗಿ ಮುಂದೆ ಬಾ ।
ಕಣ್ಣು ಬಿಟ್ಟು ನೋಡು ಬಾ ।
ಮೌನ ಬಿಟ್ಟು ನುಡಿಯ ಬಾ ।
ಕೈ ಹಿಡಿದು ಕುಣಿಯ ಬಾ ।
ಬಾ, ಬಾ, ಬಾ, ||೨||

ಸಾಯುವ ಮೊದಲು ಸವಿಯ ನೋಡ ।
ಜೀವ ಜಗದ ಸುಖವ ನೋಡ ।
ಸ್ತ್ರೀಯ ಸಂಗ ಮಾಡಿ ನೋಡ ।
ಮಿಲನ ಮಧು ಹೀರಿ ನೋಡ ।
ನೋಡ, ನೋಡ, ನೋಡ ||೩||

(ಅರಸನ್ನು ಸಾವಕಾಶವಾಗಿ ರುಕ್ಮಿಣಿಯ ಹಿಂದೆ ಬಂದು ನಿಲ್ಲುವನು ಮತ್ತು ಹೀಗನ್ನುವನು.)

ಅರಸ್ತು:— ನೀನು ಯಾರು ? ಹೂ ಹರಿದು ತೋಟವನ್ನೇ ಅಮಂಗಳ ಮಾಡಿದ ನೀನು ಯಾರು ?

ರುಕ್ಸಾನಾ:— (ಚಿಗರಿಯಂತೆ ಬೆದರಿ ನಿಂತು) ನಾನೆ: (ಹೆದರುತ್ತ ಹೆದರುತ್ತ) ರುಕ್ಸಾನಳು.

(ಅರಸ್ತು ರುಕ್ಸಾನಳನ್ನು ನೋಡ ತೊಡಗುವನು· ರುಕ್ಸಾನಳು ಅರಸ್ತುನನ್ನು ಓರೆಗಣ್ಣಿನಿಂದ ನೋಡಿ, ನಾಚಿಕೆಯಿಂದ ತಲೆತಗ್ಗಿಸುವಳು.)

ಅರಸ್ತು:— ಹೂ ಏಕೆ ಹರಿದಿ ?

ರುಕ್ಸಾನಾ:— (ಉಗುಳು ನುಂಗುತ್ತ) ಮುಡಿಯುವದಕ್ಕಾಗಿ.

ಅರಸ್ತು:— ಸ್ತ್ರೀಯರು, ಹೂ ಮುಡಿದು ಸಂತೋಷಿಸುವರು ?

ರುಕ್ಸಾನಾ:— ಹೌದು.

ಅರಸ್ತು: ಸ್ತ್ರೀಯರು, ಮುಡಿದ ಹೂವನ್ನು, ಪುರುಷರು ಮೂಸಿ ನೊಡಿ, ಮಧು ಹೀರಿ ಸಂತೋಷಿಸುವರು ?

ರುಕ್ಸಾನಾ:— ಇರಬಹುದು.

ಅರಸ್ತು:— ಇರಬಹುದೋ, ಹೌದೋ ?

ರುಕ್ಸಾನಾ:— ಹೌದು.

ಅರಸ್ತು:— ಹಾಗಾದರೆ, ನೀ ಮುಡಿದ ಹೂವನ್ನು ಮೂಸಿ ನೋಡಿ, ಮಧು ಹೀರಿ ಆನಂದಿಸಲು ಎಲ್ಲರಿಗೂ ಹಕ್ಕಿದೆಯಲ್ಲವೆ ?

ರುಕ್ಸಾನಾ:— ಇಲ್ಲ. ನನ್ನ ಮನೋವಲ್ಲಭನಿಗೆ ಮಾತ್ರ ಆ ಹಕ್ಕಿದೆ.

ಅರಸ್ತು:— ಹೂಂ.... ನೀನು ಮುಡಿದ ಹೂವಿನ ಮಧು ಹೀರಲು ನಿನ್ನ ಒಡೆಯನಿಗೆ ಮಾತ್ರ ಹಕ್ಕಿದೆ. ಆದರೆ ಈ ತೋಟದಲ್ಲಿಯ ಹೂ ಹರಿಯಲು ಅದರ ಒಡೆಯನಿಗೆ ಮಾತ್ರ ಹಕ್ಕಿದೆಯಲ್ಲವೇ ?

ರುಕ್ಸಾನಾ:— ತಪ್ಪಿಗಾಗಿ, ನಾನು ಕ್ಷಮೆ ಕೇಳುತ್ತೇನೆ.

ಅರಸ್ತು:— ಬೇಡ ನೀನು ಕ್ಷಮೆ ಕೇಳುವ ಅವಶ್ಯಕತೆಯಿಲ್ಲ. ಈ ನಿನ್ನ ಸೌಂದರ್ಯದಿಂದ ಹೂಗಳ ವಾಸನೆಯೂ ಸೌಂದರ್ಯವೂ ಮತ್ತಷ್ಟು ಹೆಚ್ಚಿದೆ. ನೀನು ರುಕ್ಸಾನಳಲ್ಲ. ಕವಿಯ ಕಲ್ಪನಾ

ಕಾದಂಬರಿಯ ನಾಯಕಿಯೇ, ನಿನ್ನಲ್ಲಿ ರೂಪಗೊಂಡು ಬಂದಿದ್ದಾಳೆ

**ರುಕ್ಸಾನಾ:—** (ಉತ್ಸಾಹ ಕುಂದಿದ ಆಶ್ಚರ್ಯದಿಂದ) ನಾನು ಕಾದಂಬರಿಯ ನಾಯಕಿಯೆ !

**ಅರಸ್ತು:—** ಏಕೆ ! ನಾನು ತಪ್ಪಾಡಿದೆನೆ? ಅಷ್ಟೇ ಅಲ್ಲ ಪುರುಷರು ಸ್ವಪ್ನದಲ್ಲಿ ನೋಡುತ್ತಿರುವ ಸೌಂದರ್ಯ ರಾಶಿಯೇ, ನಿನ್ನಲ್ಲಿ ಮೈಗೂಡಿದೆ. ಅದರೊಡನೆ ಪ್ರಣಯ ಗೀತೆಗಳೂ ನಿನ್ನಲ್ಲಿ ಕೂಡಿಕೊಂಡಿವೆ ಸ್ವರ್ಗಲೋಕದ ಅಪ್ಸರೆಯೇ ಪ್ರತ್ಯಕ್ಷ ಎದುರುಬಂದು ನಿಂತಂತೆಯೂ,ಹೂಗಳ ಕಿವಿಯಲ್ಲಿ ಮಧುರ ಕಥೆ ಹೇಳುವ ಭ್ರಮರದಂತೆಯೂ. ನೀನು ಕಾಣುತ್ತಿರುವಿ.

**ರುಕ್ಸಾನಾ:—** (ನಸುನಕ್ಕು ನಾಚಿಕೆಯಿಂದ ತಲೆ ತಗ್ಗಿಸುವಳು. ಮತ್ತು ಓರೆಗಣ್ಣಿನಿಂದ ಅರಸ್ತುನನ್ನು ನೋಡಿ, ಕಣ್ಣು ಹೊಡೆಯುವಳು.)

**ಅರಸ್ತು:-** (ಅತ್ತಿತ್ತ ಅಡ್ಡಾಡುತ್ತ) ನನ್ನ ಪ್ರಾಯವು ಗತಿಸಿ ಇಂದಿಗೆ ಬಹಳ ವರ್ಷಗಳಾದವು. ಅಂದು, ನಾನು ಯವ್ವನದಲ್ಲಿದ್ದಾಗ ನನ್ನ ಮಟ್ಟಿಗೆ ಮಾತ್ರ ಜಗತ್ತೇ ಯವ್ವನದಲ್ಲಿತ್ತು. ಆಗ ಇರಾಣದಲ್ಲಿ ನಿನ್ನ ವಯಸ್ಸಿನ ಸುಂದರ ಯುವತಿಯೊಬ್ಬಳಿದ್ದಳು. ಆಕೆ ನಕ್ಕು ನಲಿದರೆ ನನ್ನ ಜಗತ್ತಿನ ಆನಂದವು ಅತಿರೇಕಕ್ಕೆ ಮುಟ್ಟುತ್ತಿತ್ತು. ಆಕೆ ನಡೆದರೆ ನನ್ನ ಹೃದಯ ತಂತುಗಳು ಪ್ರೇಮ ಗೀತೆಗಳನ್ನು ಹಾಡುತ್ತಿದ್ದವು ಆಕೆ ಮಾತಾಡಿದರೆ ಆನಂದದ ಅಬ್ಬರದಲ್ಲಿ ಮೈಮರೆಯುತ್ತಿದ್ದೆ ಆದರೆ; ಎಂದು ಆಕೆ ನನ್ನನ್ನಗಲಿದಳೋ, ಅಂದೇ ನನ್ನ ಪ್ರೇಮವೂ ಮಂಣು ಪಾಲಾಯಿತು. ಎಂದು ಆಕೆ ನನ್ನಿಂದ ಹೊರಗಾದಳೋ ಅಂದೇ ನನ್ನ ಹೃದಯ ಮತ್ತು ಉತ್ಸಾಹಗಳು ನಾಶವಾದವು ಆಗ ನಾನು ಯವ್ವನದಿಂದ ಮುಪ್ಪನ್ನು ಮುಟ್ಟಿದೆ.

**ರುಕ್ಸಾನಾ:—** ಮನುಷ್ಯನು, ಯವ್ವನದಲ್ಲಿ ಕೂಡ ಮುದುಕನಾಗುವನೆ ?

**ಅರಸ್ತು:—** ಹೌದು,.... ಮನುಷ್ಯನು ಯವ್ವನದಲ್ಲಿ ಮುಪ್ಪನ್ನೂ ಮುಟ್ಟಬಲ್ಲ, ಮತ್ತು ಮುಪ್ಪಿನಿಂದ ಪುನಃ ಪ್ರಾಯವನ್ನೂ ಪಡೆಯಬಲ್ಲ !

(ರುಕ್ಸಾನಳ ಉತ್ಸಾಹ ಕುಂದುವದು.)

ಅರಸ್ತು:— ನನ್ನ ಜೀವನದಲ್ಲಿ ಕಾಣದ್ದನ್ನು ಇಂದು ಕಾಣುತ್ತಿದ್ದೇನೆ. ಮುಪ್ಪಾವಸ್ಥೆಯಲ್ಲಿ ಸ್ತ್ರೀಯ ಸೊಬಗು ಸವಿಯ ಬಯಸುತ್ತೇನೆ. ಅಂತೆಯೇ, ಮುಪ್ಪಿನಿಂದ ಪ್ರಾಯಕ್ಕೆ ಮರಳಿ ಬಂದಿದ್ದೇನೆ.
(ಅರಸ್ತು ಅತ್ತಿತ್ತ ಅಡ್ಡಾಡುತ್ತಿದ್ದಾನೆ ರುಕ್ಸಾನಳು ನಿರುತ್ಸಾಹ ದಿಂದ ಅರಸ್ತುನನ್ನು ನೋಡುತ್ತಿದ್ದಾಳೆ)

ಅರಸ್ತು:— ಭಯಪಡಬೇಡ ಹುಡಗಿ! ನಾನು ನಿನಗೆ ಜಗತ್ತಿನಲ್ಲಿ ಸಿಗುವ ಪ್ರತಿ ವಸ್ತುವನ್ನೂ ಕೊಡಬಲ್ಲೆ, ಆದರೆ ಒಂದು ಮಾತು ಸ್ಪಷ್ಟವಾಗಿ ಹೇಳು. ನೀನು ನನ್ನನ್ನು ಪ್ರೀತಿಸುವೆಯಾ?
(ರುಕ್ಸಾನಾ ಜೋರಿನಿಂದ ನಗುವಳು)

ಅರಸ್ತು:— ಇಲ್ಲ ನೀನು ನನ್ನನ್ನು ಪ್ರೀತಿಸಲಾರಿ (ಗೋಣು ಅಲ್ಲಾಡಿಸಿ) ನೀನೂ ಅನ್ಯರಂತೆ ಸುಂದರತೆಯ ಕಡೆಗೆ ನೋಡುತ್ತಿರುವೆಯೇ ಹೊರ್ತು ಹೃದಯ ನೋಡಲಾರಿ, ಯಾವಳು ಪುರುಷನ ಹೃದಯ ನೋಡಲಾರಳೋ ಅವಳು ಕಂಣಿದ್ದೂ ಕುರುಡಾಗಿ ಉಳಿಯುವಳು. (ಅರಸ್ತು ಹೋಗುವದಕ್ಕಾಗಿ ಹಿಂತಿರುಗುವನು. ರುಕ್ಸಾನಳು ಮುಂದೆ ಹೋಗಿ ಅಡ್ಡಗಟ್ಟಿ ನಿಲ್ಲುವಳು.)

ಅರಸ್ತು:— (ನಸುನಕ್ಕು) ನೀನು ನನ್ನನ್ನು ಪ್ರೀತಿಸದಿದ್ದರೆ ಅಡ್ಡಗಟ್ಟಿ ನಿಲ್ಲುವದರಲ್ಲಿ ಅರ್ಥವೇನು?

ರುಕ್ಸಾನಾ:— ಪ್ರೇಮದ ಕಿಮ್ಮತ್ತನ್ನು ಮನಗಾಣಿಸಿ ಕೊಡುವದಕ್ಕಾಗಿ.

ಅರಸ್ತು:— ಹಾಗಾದರೆ ಹೇಳು, ಅದರ ಬೆಲೆಯನ್ನು, ನಭೋಮಂಡಲದ ನಕ್ಷತ್ರಗಳನ್ನಾದರೂ ಕೊಟ್ಟು ಕೊಂಡುಕೊಳ್ಳುವೆನು.
(ರುಕ್ಸಾನಳು ಮುಂದೆ ಹೋಗಿ ಅರಸ್ತುನ ಕಿವಿಯಲ್ಲಿ ಏನನ್ನೋ ಹೇಳುವಳು. ಅದನ್ನು ಕೇಳಿ ಅರಸ್ತು ಬೆಚ್ಚಿ ಬೀಳುವನು. ಮತ್ತು ರುಕ್ಸಾನಳನ್ನು ದಿಟ್ಟಿಸಿ ನೋಡುವನು)

ಅರಸ್ತು:— ನೀನು ಸ್ವತಃ ಮೂರ್ಖಳಿದ್ದೀಯಲ್ಲದೆ, ನನ್ನನ್ನೂ ಮೂರ್ಖನನ್ನಾಗಿ ಮಾಡಬೇಕೆಂದು ಬಯಸಿರುವಿಯೇನು. ಅದನ್ನು ಯಾವ ಅರಹುಚ್ಚನಾದರೂ ಮಾಡಲಾರ. (ಮುಂದೆ ನಡೆಯುತ್ತ) ಅದ್ದ

ರಿಂದ ಅದು ಶಕ್ಯವಿಲ್ಲ. ಎಂದೂ ಆಗಲಿಕ್ಕಿಲ್ಲ. ಮನುಷ್ಯನು ಮನುಷ್ಯನಾಗಿಯೇ ಇರುವನು ಕತ್ತೆ ಅಥವಾ ಕುದುರೆಯಾಗಲಾರನು.

**ರುಕ್ಸಾನಾ:**— ( ಕಪಟ ದುಃಖಾಃಶ್ರುಗಳಿಂದ ಮುಂದೆ ಹೋಗಿ ) ನನಗೆ ವಿಷಾದವಾಗುತ್ತದೆ. ಪ್ರೀತಿಗಾಗಿ ಪ್ರಾಯದ ಒಂದು ಸಣ್ಣ ಬೇಡಿಕೆಯನ್ನೂ ನೀವು ಒಪ್ಪದಿದ್ದರೆ ಪ್ರೇಮ ಕೂಡುವದೆಂತು ?

**ಅರಸ್ತು:**— (ಹೊರಳಿ) ಇದರಿಂದ ಉಪಯೋಗವಾದರೂ ಏನು ? (ಪರತ ಬಂದು) ತಾ ಲಗಾಮನ್ನು ನಾನು ನಿನ್ನ ಬೇಡಿಕೆಯನ್ನು ಪೂರೈಸುವೆನು.

(ರುಕ್ಸಾನಳು ಆನಂದದಿಂದ ಒಂದು ಮೂಲೆಯಲ್ಲಿಯ ಹಗ್ಗ ತರುವಳು. ಅರಸ್ತು ಕುದುರೆಯಂತೆ ಅಂಬೆಗಾಲು ಅಂಗೈಯೂರಿ ನಿಲ್ಲುವನು. ಅವನ ಬಾಯಲ್ಲಿ ರುಕ್ಸಾನಳು ಹಗ್ಗ ಹಾಕಿ, ಡುಬ್ಬದ ಮೇಲೆ ಕೂಡ್ರುವಳು. ಅರಸ್ತು ಕುದುರೆಯಂತೆ ನಡೆಯುವನು.)

**ರುಕ್ಸಾನಾ:**— (ಸಣ್ಣ ಹುಡುಗರು ಆಡುವ ಆಟದಂತೆ ಆಟವಾಡುತ್ತ ಹಾಡುವಳು )

**— ಹಾಡು —**

ನಡಿ ಕುದರಿ ನಡಿ ನಡಿ । ನಡಿ ಕುದರಿ ನಡಿ ನಡಿ ।
ನಡಗಿಯ ನಯತೋರ್ । ನಡಿ ಕುದರಿ ನಡಿ ನಡಿ ||ಪಲ್ಲ||
ಕಂಡು ಮಾಡಿದ ಕುದುರೆ । ಕುಣಿತ್ತೈತಿ ಚಂದ ।
ಬೆಚ್ಚಬೇಡ ಬೆದರಬೇಡ । ಜಗವೇ ನಿನ್ನಾಟ ಬಲು ಚಂದ ||೧||

(ಅರಸ್ತು ಕುದರೆಯಂತೆ ನಡಿಯುವನು. ರುಕ್ಸಾನಳು ಮತ್ತೆ ಹಾಡುವಳು.)

ಕಾಲ ಸಪ್ಪಳ ತಾಳವಿರಲಿ ।
ಗೋಣು ಎತ್ತಿ ಸಾಗುತಿರಲಿ ।
ಹೆಂಣಿಗಾಗಿ ಆದ ಕುದರೆ ।
ಮಂಕಾದ ಮೂಢ ಕುದರೆ ||೩||

(ಸಿಕಂದರನು ಎದುರು ಬಂದು ನಿಲ್ಲುವನು ಮತ್ತು ಸಿಟ್ಟಿನಿಂದ ಹೀಗನ್ನುವನು.)

**ಸಿಕಂದರ:**— ಸಿಟ್ಟಿನಿಂದ ರುಕ್ಸಾನಾ !

(ಅರಸ್ತು ರುಕ್ಸಾನಳನ್ನು ಬೆನ್ನ ಮೇಲಿಂದಿಳಿಸಿ ಎದ್ದು ನಿಲ್ಲುವನು.)

**ರುಕ್ಸಾನಾ:**— (ಚಪ್ಪಾಳೆ ಹೊಡೆಯುತ್ತ) ಸ್ತ್ರೀಯು ಪುರುಷನ ಅವನತಿಗೆ ಮಹಾ ಕಾರಣಳಾಗಿರುವಳು. ಯಾರು ತನ್ನನ್ನು ತಾನು ಗೆದೆಯ ಬೇಕೆಂದಿರುವನೋ, ಆವನು ಸ್ತ್ರೀ ವ್ಯಾಮೋಹದಿಂದ್ದೂರಗುಳಿಯ ಬೇಕು ! (ಹಂಗಿನ ನುಡಿಯಲ್ಲಿ ಹೇಳುವಳು.)

(ಅರಸ್ತು ರುಕ್ಸಾನಳತ್ತ ನೋಡುವನು ಆದರೇನನ್ನೂ ಮಾತಾಡು ವದಿಲ್ಲ )

**ಸಿಕಂದರ:**— ಗುರೂಜೀ ! ಒಳಗೆ ನಡೆಯಿರಿ, ಈ ಹುಡಿಗೆಯು ತಮ್ಮ ಕಣ್ಮುಂದೆ ನಿಲ್ಲಲಿಕ್ಕೂ ಯೋಗ್ಯಳಿಲ್ಲ.

(ಅರಸ್ತು ಮೊದಲು ಸಿಕಂದರನನ್ನೂ ಆನಂತರ ರುಕ್ಸಾನಳನ್ನೂ ಪುನಃ ಸಿಕಂದರನನ್ನೂ ಹೊರ ಹೊರಳ ನೋಡುವನು.)

**ಅರಸ್ತುಃ**— ನೀನು ನಿರುತ್ಸಾಹಿ ಆಗುತ್ತಿರುವಿ, ಗುರುವಿಗಿಂದು ಏನು ಆಗಿದೆ. ಈ ಹುಡುಗಿ ಇಷ್ಟು ಖುಷಿಯಾಗಲು ಕಾರಣವೇನು ? ಎಂದು ನೀನು ಆಲೋಚಿಸಬಹುದು. ಆಕೆ ಇಂದು ನನ್ನನ್ನು ಸೋಲಿ ಸಿದಳು. ಆದರೆ ! ಹೆಂಗಸು ಮಂದ ಬುದ್ಧಿಯೂ ಮುದುಕನೂ ಆದ ನನ್ನನ್ನೇ ಮೂರ್ಖನನ್ನಾಗಿ ಮಾಡಿದಳು. ನಿಮ್ಮಂಥ ತರುಣರಿ ಗೇನು ಮಾಡಲಿಕ್ಕಿಲ್ಲ. ಮುಪ್ಪು ಬರ್ಫಕ್ಕಿಂತಲೂ ತಂಣಗಿರುತ್ತದೆ. ಯವ್ವನ ಬೆಂಕಿಗಿಂತಲೂ ಬಿಸಿ ಇರುತ್ತದೆ. ಮುಪ್ಪಿನಲ್ಲಿ ಮಂದ ಬುದ್ಧಿಯಿದ್ದರೂ ಅನುಭವ ಮತ್ತು ತಿಳುವಳಿಕೆಗಳು ತುಂಬಿರುತ್ತವೆ. ಮುದುಕನು ನೋಡುವನು. ನೋಡಿ ಆಲೋಚಿಸುವನು. ತರುಣನು ನೋಡುವನು, ಪ್ರಜ್ಞಾಹೀನನಾಗುವನು. ದೇವರು ನಿನಗೆ ನೋಡು ವದಕ್ಕೆ ಕಂಣನ್ನೂ, ಕೇಳುವದಕ್ಕೆ ಕಿವಿಯನ್ನೂ ಕೊಟ್ಟಿರುವನು. ನೋಡಿರುವಿ ಮತ್ತು ಕೇಳಿರುವಿ ಆದ್ದರಿಂದ ಆಲೋಚಿಸು. ಮುದು ಕನಿಗನೇ ಶೆರೆಯ ನಿಶೆಯನ್ನು ನೆತ್ತಿಗೇರಿಸಿದ ಮೇಲೆ, ತರುಣನ ಮೇಲೆ ಯಾವ ಜಾದೂ ಮಾಡಲಿಕ್ಕಿಲ್ಲ. (ಸಿಕಂದರನ ಚಹರೆಯಲ್ಲಿ ನಿರುತ್ಸಾಹ ಮೂಡುವದು) ಸಿಕಂದರ! ಈ ಘಟನೆಯು ನಿನ್ನ ಗುರು

ವಿನ ಸೋಲಲ್ಲ. ನಿನ್ನ ಜೀವನದಲ್ಲಿಯು ಒಂದು ದೃಷ್ಟಾಂತವಿರುವದು. ಇದನ್ನು ನಿನ್ನ ಹೃದಯದಲ್ಲಿ ಬಂಧಿಸಿಡು. ಇಡೀ ಜೀವನದಲ್ಲಿ ಅದರ ಉಪಯೋಗ ಸಾಕಷ್ಟು ಬೀಳುವದು.

(ಅರಸ್ತು ಹೊರಟು ಹೋಗುವನು. ಸಿಕಂದರ ಮತ್ತು ರುಕ್ಸಾನಳಿಬ್ಬರೂ ಆದರಪೂರ್ವಕ ದೃಷ್ಟಿಯಿಂದ ಅರಸ್ತುನನ್ನು ನೋಡುವರು ಅರಸ್ತು ಹೊರಟು ಹೋದ ನಂತರ ಸಿಕಂದರನು ರುಕ್ಸಾನಳತ್ತ ಹೊರಳಿ ನಿಂತು—)

**ಸಿಕಂದರ:—** ನೀನು ನೋಡಿದಿಯಾ ! ನನ್ನ ಗುರುವಿನ ಮರ್ಮಭೇದಕ ಎರಡೇ ಎರಡು ಮಾತುಗಳಿಂದ, ತನ್ನ ಸೋಲನ್ನು ಗೆಲುಪಿನಲ್ಲಿ ರೂಪಾಂತರಿಸಿದನು. ನಿಜವಾಗಿಯೂ ಗಂಡಿಸಿನ ಜೀವನ ಗೆಲುವಿನಲ್ಲುಂಟು.

**ರುಕ್ಸಾನಾಃ—** ಮಹರಾಜ ! ಮಾನವನ ಮನಸ್ಸಿನ ಉತ್ಸಾಹ, ಕೇವಲ ಯುದ್ಧ ಮತ್ತು ಗೆಲುವಿನಲ್ಲಿಲ್ಲ. ಪ್ರೇಮ ಮತ್ತು ಪ್ರೀತಿಗಳಲ್ಲಿಯೂ ಅದೆ.

**ಸಿಕಂದರಃ—** ಯಾವನ ಮೇಲೆ ದೇವರ ದಯವಿರುವದೋ ಅವನಿಗೆ ನಿನ್ನ ಗೆಲುವಿನ ಮತ್ತು ಹೆಮ್ಮೆಯ ಜೀವನವನ್ನೂ ಜೀವನದ ಆಶೆಯನ್ನೂ ಅರ್ಪಿಸಿ ಬಿಡು. (ರುಕ್ಸಾನಳು ನಿರುತ್ಸಾಹ ಮತ್ತು ನಿಸ್ತೇಜದಿಂದ ಸಿಕಂದರನನ್ನು ನೋಡುವಳು.) ರಾಜನಕಡೆಗೆ ಆಶಾ ದೃಷ್ಟಿಯಿಂದ ನೋಡಬೇಡ. ರಾಜನ ಮನಸ್ಸು ಪ್ರಣಯ ಪ್ರಪಂಚಕ್ಕಾಗಿ ನಿನ್ನನ್ನು ಆರಿಸಿಕೊಂಡಿವೆ. ಆದರೆ ಜಗತ್ತನ್ನೇ ಗೆದೆಯಬೇಕೆಂಬ ಪ್ರತಿಜ್ಞೆಯೊಂದಿದೆ. ಆ ಕಾರಣದಿಂದ ನೀನು ನಿನ್ನ ಸೌಂದರ್ಯ ಮತ್ತು ಯವ್ವನಗಳೊಡನೆ ನನ್ನ ಬರುವಿಕೆಯನ್ನು ಎದುರು ನೋಡುತ್ತಿರು. ನಾನು ಆದಷ್ಟು ತೀವ್ರ ಜಗತ್ತನ್ನು ಗೆದ್ದು ನಿನ್ನ ಹತ್ತರ ಬರುವೆನು........ "ದೇವರು ಕಾಪಾಡಲಿ".

(ಸಿಕಂದರನು ಹೊರಟು ಹೋಗುವನು. "ದೇವರು ಕಾಪಾಡಲಿ" ಶಬ್ದ ಕೇಳಿ ರುಕ್ಸಾನಳ ಉತ್ಸಾಹ ಕುಂದಿ ಹೋಗುವದು. ಅಷ್ಟರಲ್ಲಿ ಪಡದೆ ಬೀಳುವದು.)

## ದೃಶ್ಯ ೫

ಸ್ಥಾನಃ · ರಸ್ತೆಯಲ್ಲಿ ವೇಳೆ: ಮಧ್ಯಾಹ್ನ

(ಸೈನಿಕರು ಜೋರಿನಿಂದ "ದೇವರೇ ರಕ್ಷಿಸು." "ದೇವರೇ ರಕ್ಷಿಸು." ಅನ್ನುತ್ತ ನಡೆದಿರುವರು. ಅವರ ಮುಂದೆ ಅರಸ್ತು ಮತ್ತು ಸಿಕಂದರರು ಇರುವರು ಕೊರಳಲ್ಲಿ ಹೂವಿನ ಹಾರಗಳಿರುವವು ಅವರ ಹಿಂದಿನಿಂದ ಸಾಲಾಗಿ ರಥಗಳು ಬರುತ್ತಿರುವವು ರಥಗಳ ಸಂಗಡ ಶೆಲುಕ್ಯಸ ಎರಟಿಗಣೇಶ ಮತ್ತು ಯಮುನೀಸರಿರುವರು.)

ಅರಸ್ತು:— ನನಗೆ ತ್ರಾಸ ಮಾಡಬೇಡ ! ನಾನು ಪರತ ಹೋಗುವೆನು. ಜನ್ಮ ಭೂಮಿಯು ಈ ಮುದುಕನನ್ನು ಕೈಮಾಡಿ ಕರೆಯುತ್ತಿದೆ. ನನ್ನ ಮೃತ ದೇಹವನ್ನು ತನ್ನ ಒಡಲಲ್ಲಿಟ್ಟುಕೊಳ್ಳಲು ಹಾತೊರೆ ತ್ತಿದೆ. ನನ್ನ ಮನಸ್ಸು ಕೂಡ ಅದಕ್ಕೆ ಧ್ವನಿಗೂಡಿಸಿ ಇರಾಣದ ಹೊರ್ತು ಇನ್ನೆಲ್ಲಿಯೂ ಈ ಶ್ರವದ ಸಂಸ್ಕಾರವಾಗಕೂಡದೆಂದು ಹೇಳುತ್ತಿದೆ.

ಸಿಕಂದರಃ— ಆವರೆ ಗುರುವರ್ಯ! ತಮ್ಮ ಹೆಜ್ಜೆಗಳು ಎತ್ತ ಬೀಳುವವೋ ಅತ್ತ ನನ್ನ ಮನಸ್ಸೂ ಹೊರಡುವದು. ಆಗ ನಾನೇನು ಮಾಡಬಲ್ಲೆ.

ಅರಸ್ತುಃ— ಎಲ್ಲಿ ನಿನಗೆ ಉಪಕಾರವಿದೆಯೋ ಅಲ್ಲಿ, ನನ್ನೊಡನೆ ನೀನು ಮರ್ಯಾದೆಯ ಮಾತುಗಳನ್ನಾಡುವಿ. ಆದರಿಷ್ಟೇ ನನ್ನ ಹತ್ತಿರ ಏನಿತ್ತೋ ಅದೆಲ್ಲವನ್ನೂ ನಿನಗೆ ಕೊಟ್ಟಿದ್ದೇನೆ. ಆದರೂ ಒಂದು ಮಾತು ಉಳಿದಿದೆ. ಪುರುಷನು ವಿಚಾರ ವಿವೇಕಗಳಿಂದ ಕೆಲಸವ ನ್ನೆಂದು ಕೈಕೊಳ್ಳುವದಿಲ್ಲವೋ ಅಂದಿನಿಂದ ಅವನ ಬುದ್ಧಿಯಬಾಗಿಲು ಮುಚ್ಚಿಕೊಂಡಿದೆಯೆಂದು ತಿಳಿ. ಹೆಂಗಸು ಏನು ಮಾಡಬಲ್ಲಳು, ಅದನ್ನು ನಿನಗಿಂದು ತೋರಿಸಿ ಕೊಟ್ಟಿದ್ದೇನೆ. ಈಗ ನೀನು ಪರಿ ಪೂರ್ಣನಾಗಿರುವಿ. ಎಲ್ಲವನ್ನೂ ತಿಳಿದವನಾಗಿರುವಿ. ಇನ್ನುಮೇಲೆ, ಯಾವದು ನಿನಗೆ ತಿಳಿಯುವದಿಲ್ಲವೋ ಅದು ನನಗೂ ತಿಳಿಯಲಾರದು. ಇನ್ನು; ನಿನ್ನ ಮನಸ್ಸು ನನ್ನ ಹೆಜ್ಜೆಯತ್ತ ಹರಿಯುವದವಶ್ಯವಿಲ್ಲ. ಈಗ ನೀನು ಸ್ವತಃ ಗುರು ಆಗಿರುವಿ, ನಿನ್ನ ಗುರು ನೀನೇ ಆಗಿರುವಿ.

(ಅರಸ್ತು ಸಿಕಂದರನ ಕೈಹಿಡಿದು ರಥವನೇರಿಸುವನು)

**ಸಿಕಂದರಃ—** ನಿಮ್ಮೊಡನೆ ಇರಾಣಕ್ಕೆ ಬರಲು ನನಗೂ ಅಪ್ಪಣೆ ಕೊಡುವಿರಾ ?

**ಅರಸ್ತುಃ—** ನಾನು ನಿನಗೆ, ಪರತ ಇರಾಣಕ್ಕೆ ಬರಲು ಅಪ್ಪಣೆ ಕೊಟ್ಟಿದ್ದಾದರೆ, ಇರಾಣವು ನನ್ನನ್ನು ಎಂದೂ ಕ್ಷಮಿಸಲಾರದು. ಇರಾಣವು ಜಗತ್ತನ್ನೇ ನಿನ್ನಿಂದ ಗೆದೆಯಿಸಬೇಕೆಂಬ ಆಶೆಯನ್ನಿಟ್ಟುಕೊಂಡಿರುವದು. ಇರಾಣದ ಆ ಆಶೆಯನ್ನು ಪೂರೈಸುವ ಸಾಮರ್ಥ್ಯ ನಿನ್ನಲ್ಲಿದ್ದರೆ ಜಗತ್ತನ್ನು ಗೆದಿ. ಜಗತ್ತಿನ ಏಕಛತ್ರಾಧಿಪತಿಯೆಂಬ ಕೀರ್ತಿಯೊಡನೆ ಮರಳಿ ಬರುವ ನಿನ್ನ ದಾರಿಯನ್ನು, ಇರಾಣವು ಕಾಯುತ್ತಿರುವದು.

**ಸಿಕಂದರಃ—** ಆದರೆ ಗುರುಗಳೇ !........

**ಅರಸ್ತುಃ—** ( ನಡಿವೆ ಬಾಯಿ ಹಾಕಿ ) ಆದರೆ ಗೀದರೆ ಏನೂ ಇಲ್ಲ ! ದೇವರ ಮೇಲೆ ಭರವಸೆಯನ್ನಿಡು. ಸೈನಿಕರ ಮನ ನೋಯುವ ಯಾವ ಘಟನೆಯೂ ಜರುಗದಂತೆ ಎಚ್ಚರಾಗಿರು. ಮತ್ತು ತೆಗಳಿಕೆ ಹೊಗಳಿಕೆಗಳ ವ್ಯಾಮೋಹದಿಂದ ನಿನ್ನನ್ನು ನೀನು ಉಳಿಸಿಕೋ. ಆಗ ಜಗತ್ತಿನ ಪ್ರತಿಗೆಲವೂ ವಸ್ತುಗಳೂ ನಿನ್ನವಾಗುವದನ್ನು ನೀನು ಕಾಣುವಿ "ದೇವರು ಕಾಪಾಡಲಿ" !

**ಸಿಕಂದರಃ—** (ತಲೆ ತಗ್ಗಿಸಿ) ದೇವರು ಕಾಪಾಡಲಿ !

**ಅರಸ್ತುಃ—** (ರಥದಲ್ಲಿ ಎದ್ದು ನಿಂತು ಸೈನಿಕರಿಗೆ) ದೇವರು ಕಾಪಾಡಲಿ !

**ಸೈನಿಕರುಃ—** (ದೊಡ್ಡ ಧ್ವನಿಯಿಂದ) ದೇವರು ಕಾಪಾಡಲಿ

(ರಥ ಹೊರಟು ಹೋಗುವದು. ಸಿಕಂದರನು ನೋಡುತ್ತ ನಿಲ್ಲುವನು. ಒಮ್ಮೆಲೇ ಹೊರಳಿ ನಿಂತು ಶೆಲುಕ್ಯಸನನ್ನು ಉದ್ದೇಸಿಸಿ ಹೀಗನ್ನುವನು.)

**ಸಿಕಂದರಃ—** ಶೆಲುಕ್ಯಸ !

(ಶೆಲುಕ್ಯಸ ಮುಂದೆ ಬಂದು ಇರಾಣದ ಪದ್ಧತಿಯ ಪ್ರಕಾರ ಶರಣು ಮಾಡುವನು )

**ಸಿಕಂದರಃ—** ಸೈನ್ಯ ಮುನ್ನಡೆಯಲು ಆಜ್ಞೆಮಾಡು. ಹಿಂದುಸ್ಥಾನದ ಮೇಲೆ ದಾಳಿ ಮಾಡೋಣ

(ಶೆಲುಕ್ಯಸ ತಲೆ ತಗ್ಗಿಸುವನು. ಸೈನ್ಯದ ವಾದ್ಯಗಳ ಶಬ್ದ ಪ್ರಾರಂಭ ವಾಗುವದು ಸೈನಿಕರು ಹಾಡುತ್ತ ಪ್ರವೇಶ ಮಾಡುವರು.)

— ಹಾಡು —

ಬಾಳಿನಲ್ಲಿ ಪ್ರೇಮವಿದೆ । ಪ್ರೇಮದಲ್ಲಿ ಪ್ರೀತಿಯಿದೆ ।
ಪ್ರೀತಿಯಲ್ಲಿ ತ್ಯಾಗವಿದೆ । ತ್ಯಾಗದಲ್ಲಿ ಶಕ್ತಿಯಿದೆ ।
ತ್ಯಾಗದಲ್ಲಿ ಬಾಳಿದೆ ।
ಬಾಳಿನಲ್ಲಿ ಪ್ರೇಮವಿದೆ ।
ಬಾಳು ಎಂಬುದೊಂದು ರಾತ್ರಿ । ಪ್ರೇಮ ಅದರಲ್ಲೊಂದು ದೀಪ ।
ಪ್ರೇಮ ದೀಪ ಉರಿಯಲಿ । ಬೆಳಕಿನಲ್ಲಿ ನಡೆಯಿರಿ ।
ಬೆಳಕಿನಲ್ಲಿ ಬಾಳಿದೆ ।
ಬಾಳಿನಲ್ಲಿ ಪ್ರೇಮವಿದೆ ।

ಬಾಳು ಎಂಬುದೊಂದು ತೋಟ । ಪ್ರೇಮ ಅದರಲ್ಲೊಂದು ಪುಷ್ಪ ।
ಪ್ರೇಮ ಪುಷ್ಪ ಅರಳಲಿ । ಶುದ್ಧ ಪರಿಮಳ ಬೀರಲಿ ।
ಶುದ್ಧ ಶ್ವಾಸ ಮಾಡಲಿ ।
ಬಾಳಿನಲ್ಲಿ ಪ್ರೇಮವಿದೆ ।
ಬಾಳು ಎಂಬುದೊಂದು ಸಂತೆ । ಅಲ್ಲಿ, ಎಲ್ಲ ವಸ್ತು ಸಿಗುವವಂತೆ !
ಪ್ರೇಮ ಕೊಟ್ಟು ಕೊಂಡುಕೋ । ತ್ಯಾಗ ಕೊಟ್ಟು ಬದುಕಿಕೋ ।
ಜೀವ ಕೊಟ್ಟು ದೇಶ ತಗೋ ।
ಬಾಳಿನಲ್ಲಿ ಪ್ರೇಮವಿದೆ ।

(ಸೈನಿಕರು ಹಾಡುತ್ತ ಹೆಜ್ಜೆ ಹಾಕುತ್ತಿರುವರು ಸೈನಿಕರು ಯಾವ ಯಾವ ದೇಶಗಳಲ್ಲಿ ಹಾಯ್ದು ಹಿಂದುಸ್ಥಾನಕ್ಕೆ ಬಂದರು? ಎಂದು ತೋರಿಸುವದಕ್ಕಾಗಿ ಹಿಂದಿನ ಪಡದೆಯನ್ನು ಬದಲಿಸುತ್ತ ಹೋಗಬೇಕು. ಕೊನೆಗೆ ಹಿಂದುಸ್ಥಾನದ ನಕಾಶ ಬರುವದು, ಆಗ ಹಾಡು ಇನ್ನೂ ಸ್ವಲ್ಪಿರುವದು. ಅದನ್ನು ಹಾಡುತ್ತ ಹೊರಟು ಹೋಗುವರು. ಹಿಂದುಗಡೆ ರುಕ್ಸಾನಳು ಬರುವಳು. ಆಕೆ ಸೈನಿಕರ ಹಿಂದಿಂದ ಸ್ವಲ್ಪ ದೂರದ ಅಂತರದಲ್ಲಿ ಬರುವಳು ಮತ್ತು ಹೋಗುವಳು.)

## ದೃಶ್ಯ ೬

**ಸಾನ್ಥಃ—** ಪುರು ಮಹಾರಾಜನ ಅರಮನೆ.

**ವೇಳೆಃ—** ಮಧ್ಯಾಹ್ನ ೩ ಘಂಟೆಯ ಸಮಯ.

(ಮಹಾರಾಜಾ ಪುರುರಾಜನು, ತನ್ನ ಮಂತ್ರಿಯಾದ ಬುದ್ಧಿಚಂದ್ರ, ಸೇನಾಪತಿ ಅಭಿಸಾರ, ಕೋಶಾಧ್ಯಕ್ಷ ಧನರಾಜ, ರಾಜಕುಮಾರ ಅಮರ ಮತ್ತು ಸಮರ ಸಿಂಹರೊಡನೆ ಕೂತಿರುವನು ಒಬ್ಬ ರಾಜ ದೂತನು ಬಂದು ದರ್ಬಾರದ ಪದ್ಧತಿಯಂತೆ ಶರಣುಮಾಡಿ)

**ದೂತಃ—** ಮಹಾರಾಜರಿಗೆ ಜಯವಾಗಲಿ !

**ಪುರು:—** ಭಾರತಮಾತೆಗೆ ಜಯವಾಗಲಿ ! ಏನು ಸುದ್ದಿ ತಂದಿರುವಿ ?

**ದೂತ:—** ಸಿಕಂದರನು, ಸಿಂಧಪ್ರಾಂತ ಗೆದ್ದು ಈಗ ಪುನಃ ಮುನ್ನಡೆದಿದ್ದಾನೆ.

**ಪುರು:—** ಅವನ ಹತ್ತಿರ ಸೈನಿಕರೆಷ್ಟಿರುವರು ?

**ದೂತ:—** ಒಂದು ಲಕ್ಷಕ್ಕಿಂತಲೂ ಹೆಚ್ಚಿದೆಯೇ ಹೊರತು ಕಡಿಮೆಇಲ್ಲ.

**ಪುರು:—** ಮಹಾರಾಜ ಅಂಭಿರಾಜರು ಅವನನ್ನು ಎದುರಿಸಲಿಲ್ಲವೇನು ?

**ದೂತ:—** ನಾನು ಹೀಗೆ ಕೇಳಿದ್ದೇನೆ. ಮಹಾರಾಜ ಅಂಭಿರಾಜರು ಸೋಲನ್ನೊಪ್ಪಿಕೊಳ್ಳಲು ನಿಶ್ಚಯಿಸಿದ್ದಾರಂತೆ.

**ಪುರುಃ—** ಹೂಂ...., ಬೆಂಕಿಯು ನೀರಿನ ಹೆಸರು ಕೇಳುತ್ತಲೇ ತಣ್ಣಗಾಯಿತೇನು! ಕೇಳಿದಿಯಾ ರಾಜಕುಮಾರ !

**ಸಮರಃ—** ಕಟ್ಟಿಗೆಯ ತಲವಾರವು ಏನನ್ನೂ ಕತ್ತರಿಸಲಾರದು.

**ದೂತಃ—** ಇದೂ ಅಲ್ಲದೆ, ಮಹಾರಾಜ ಅಂಭಿರಾಜನು ಸಿಕಂದರನ ಸಹಾಯ ತಗೊಂಡು, ನಮ್ಮರಾಜ್ಯದ ಮೇಲೆ ದಾಳಿ ಮಾಡಿ ಗೆದ್ದು ಶಕ್ತಿವಂತನಾಗಬೇಕೆಂದು ಆಲೋಚಿಸುತ್ತಿದ್ದಾನೆ.

**ಪುರು:—** ಯಾರ ಹತ್ತಿರ ತನ್ನ ಶಕ್ತಿ ಇರುವದಿಲ್ಲವೋ, ಅವನಿಗೆ ದೇವರು ಕೂಡಾ ಶಕ್ತಿಯನ್ನು ಕೊಡಲಾರನು. ಶಕ್ತಿಯು ಆತ್ಮದಿಂದ ಉಕ್ಕುವದೇ ವಿನಃ ಹೊರಗಿನಿಂದ ಬರಲಾರದು. ಯಾರು ಹೊರಗಿನ ಶಕ್ತಿಯ ಮೇಲೆ ಭರವಸೆಯನ್ನಿಡುವರೋ ಅವರು,ತನ್ನ ಸಲುವಾಗಿ

ಕರಾಳ ಕತ್ತಲೆಯನ್ನು ಕೈಮಾಡಿ ಕರೆದಂತೆ. (ದೂತನಿಗೆ) ನೀನು ಹೋಗಬಹುದು.

(ದೂತನು ಹೊರಟು ಹೋಗುವನು. ಮಂತ್ರಿಯು ಚಿಂತೆಮಾಡುತ್ತಿರುವಂತೆ ಕಾಣುವನು.)

**ಪುರು:**— (ನಸುನಕ್ಕು) ಯಾಕೆ ಮಂತ್ರಿಗಳೇ ಗಾಬರಿಯಾದಿರೇನು ? ವೀರರ ಜಗತ್ತಿನಲ್ಲಿ ಗಾಬರಿಯಾಗುವದೊಂದು ಮಹಾ ಪಾಪವಿದೆ.

**ಮಂತ್ರಿ**— ನಾನು ಗಾಬರಿಯಾಗಿಲ್ಲ. ಆಲೋಚಿಸುತ್ತಿದ್ದೇನೆ. ಮನೆಯ ಬಾಗಿಲವೊಂದು ಕಳ್ಳರೊಡನೆ ಕೂಡಿಕೊಂಡರೆ, ಮನೆಯ ಪರಿಸ್ಥಿತಿ ಯೇನಾಗಬಹುದು ?

**ಪುರು:**— ಮನೆಯ ಹೊರಗಿನ ಬಾಗಿಲವೊಂದು ಕಳ್ಳನೊಡನೆ ಕೂಡಿಕೊಂಡರೇನಾಯಿತು. ಉಳಿದ ಒಳಗಿನ ಬಾಗಿಲಗಳು ಘಟ್ಟಿಯಾಗಿದ್ದರೆ ಕಳ್ಳರೇನು ಮಾಡುವರು.

**ಅಮರ:**— ಮನೆಯೊಳಗಿನ ಪ್ರತಿ ಬಾಗಿಲವೂ ಭದ್ರವಾಗಿ ಇರುವವು. ತಂದೆಯವರೇ ! ನಮ್ಮ ಮೇಲೆ ವಿಶ್ವಾಸವಿಡಿರಿ. ಜೀವನದಲ್ಲಿ ಶಕ್ತಿಯಿದೆ ಆದ್ದರಿಂದ ನಾವು ಗೆದೆಯುವೆವು.

**ಸಮರ:**— ತಂದೆಯವರೇ ! ಸಿಕಂದರನು ಈವರೆಗೆ ಜೀವದ ಆಶೆಯಿದ್ದವರನ್ನು ನೋಡಿದ್ದಾನೆ, ಸ್ವಾಭಿಮಾನದ ಆಶೆಯಿದ್ದವರನ್ನು ನೋಡಿಲ್ಲ........

**ಪುರು:**— (ನಡುವೆ ಬಾಯಿ ಹಾಕಿ) ಮಗು!....ಅದು; ಯುದ್ಧ. ಯುದ್ಧದ ಸಲುವಾಗಿ ಎಲ್ಲ ವಸ್ತುಗಳೂ ಬೇಕಾಗುವವು. (ಕೋಶಾಧ್ಯಕ್ಷನ ಕಡೆಗೆ ಮುಖ ಮಾಡಿ) ಹಾಂ.... ಖಜಾನೆಯಲ್ಲಿಯ ಎಲ್ಲ ಹಣವೂ ಆಗಿ ಹೋದರೆ, ಆಗೇನು ಮಾಡಬೇಕು ? ಆಲೋಚನೆ ಮಾಡಿ ಹೇಳುವಿರಾ ?

**ಕೋ, ಅಧ್ಯಕ್ಷ:**— ನಮ್ಮ ಮನೆಯ ಒಂದೊಂದು ವಸ್ತುವನ್ನು ಮಾರಿ ಬರುವ ಹಣವನ್ನು ಜಮಾ ಮಾಡಿಕೊಡುವೆವು.

**ಪುರು:**— ಸೇನಾಪತಿ ! ಶತ್ರುವಿನ ಸೈನ್ಯ ನಮ್ಮ ಸೈನ್ಯಕ್ಕಿಂತ ಬಹಳ ಹೆಚ್ಚಾಗಿದ್ದರೆ ?

**ಸೇನಾಧಿಪತಿ**:— ನೀವು ದೀರ್ಘಾಯುಷ್ಯವಂತರಾಗಿರುವಿರಿ, ನಮ್ಮ ಒಬ್ಬೊಬ್ಬ ಸೈನಿಕನು ನಾಲ್ಕು ನಾಲ್ಕು ಶತ್ರು ಸೈನಿಕರನ್ನು ಹೊಡೆಯಬಲ್ಲನು.

**ಅಮರ**:— ನಿಮ್ಮ ರಕ್ತ; ನನ್ನ ಮತ್ತು ಸಮರನ ದೇಹದಲ್ಲಿ ಜೀವಂತವಿರುವದು.

**ಪುರು**:— (ಆನಂದದಿಂದ) ಹೀಗಿದ್ದರೆ ಸ್ವತಃ ಬ್ರಹ್ಮನೂ ನಮ್ಮನ್ನು ಸೋಲಿಸಲಾರ, ದಂಡನಾಯಕರೆ! ನೀವು ನಿಮ್ಮ ತಯಾರಿಯನ್ನು ಮುಗಿಸಿರಿ, ನಾವು ಯುದ್ಧ ಮಾಡೋಣ. ಮಂತ್ರಿಯವರೇ ನೀವು ಕಾಸ್ಮಿರ, ಶೆಲಕೋಟೆ, ಕಲುತ ರಾಜರಿಗೆ ನಮ್ಮ ನಿರ್ಧಾರದೊಡನೆ ಆಮಂತ್ರಣ ಕಳಿಸಿಕೊಡಿರಿ.

**ಮಂತ್ರಿ**:— ಆದರೆ ಅವರು ಬರುವರೆ?

**ಪುರು**:— (ನಸುನಕ್ಕು) ಯಾಕೆ ಬರುವದಿಲ್ಲ! ಯಾರಲ್ಲಿ ಮಾನವತೆ ಇದೆಯೋ ಅವರು ಆಯಿಷ್ ಆರಾಮದಲ್ಲಿ ಕಾಲ ಕಳೆಯಲಾರರು. ಅವರಿಗೆ ಹೀಗೆಬರೆಯಿರಿ,ಇಂದು ನಮ್ಮದೇಶದ ಮೇಲೆ ಹೊರಗಿನವನೊಬ್ಬ ದಾಳಿ ಮಾಡಿದ್ದಾನೆ. ಅವನನ್ನು ನಾವೆಲ್ಲರೂ ಒಂದುಗೂಡಿ ಎದುರಿಸಿ ಓಡಿಸದಿದ್ದರೆ ನಮ್ಮ ಪೀಳಿಗೆ ನಮಗೆ "ಭ್ರಷ್ಟ"ರೆಂದು ಕರೆಯಬಹುದು. ಮತ್ತು ನಮ್ಮ ರಾಜ್ಯದಲ್ಲಿ ವಿದೇಶಿ ರಾಜರು ರಾಜ್ಯಭಾರ ಮಾಡಬಹುದು.

---

## ದೃಶ್ಯ ೭

**ಸ್ಥಾನ**:– ಅಂಭಿರಾಜನ ಅರಮನೆ  **ವೇಳೆ**:- ಸಾಯಂಕಾಲ

(ಅಂಭಿರಾಜ ಮತ್ತು ಅವನ ತಂಗಿಯಾದ ಪ್ರಾರ್ಥನಾ ಇಬ್ಬರೂ ಮಾತಾಡುತ್ತ ಕುಳಿತಿರುವರು. ಪ್ರಾರ್ಥನಾ ಸಿಟ್ಟಿನಲ್ಲಿರುವಳು ಅಂಭಿರಾಜನು ಅವಳನ್ನು ಸಮಾಧಾನ ಪಡಿಸಲು ಯತ್ನಿಸುತ್ತಾನೆ.)

ಪ್ರಾರ್ಥನಾ:— ನಮ್ಮ ದೇಶದ ಮೇಲೆ ವಿದೇಶಿ ರಾಜರು ರಾಜ್ಯಭಾರ ಮಾಡಲು ಶಕ್ಯವಿಲ್ಲ.

ಅಂಭಿರಾಜ:— ಪ್ರಾರ್ಥನಾ ! ನೀನು ನನ್ನ ತಂಗಿ ಇದ್ದೀ ಇದನ್ನು ನೀನು ನೆನಪಿಡು.

ಪ್ರಾರ್ಥನಾ:—ನೀವು ರಾಜರಿರುವಿರಿ !ನಿಮಗೆ ನಿಮ್ಮ ರಾಜ್ಯದನೆನಪಿರಲಿ

ಅಂಭಿರಾಜ:— (ಅತ್ತಿತ್ತ ಅಡ್ಡಾಡುತ್ತ) ನಾನು ನಿರುಪಾಯನಾಗಿದ್ದೇನೆ ನ್ನುವದು, ನಿನಗ್ಯಾಕೆ ತಿಳಿಯಬಾರದು. ನಾನು ಏನು ಮಾಡು ವೆನೋ ಅದನ್ನು ನನ್ನ ದೇಶದ ಹಿತಕ್ಕಾಗಿ ಮಾಡುತ್ತಿರುವೆನು.

ಪ್ರಾರ್ಥನಾ:— ನಿಮ್ಮಷ್ಟಕ್ಕೆ ನೀವೇ ಮೋಷ ಹೋಗುತ್ತಿದ್ದೀರಿ. ನಿಮಗೆ ನಿಮ್ಮ ಜೀವದ ಮೇಲೆ ಆಶೆಯಿದೆ. ಜೀವನವನ್ನು ಸುಖ ಮತ್ತು ಆರಾಮದಿಂದ ಕಳೆಯಬೇಕೆಂದು ಆಶೆ ಮಾಡಿರುವಿರಿ. ಆದರೆ ಜೀವನದ ಸುಖ; ಜೀವದಮೇಲಿನ ಆಶೆ ಮತ್ತು ಆರಾಮದಿಂದ ದೊರೆಯಲಾರದು ಜೀವನಸುಖ ಮತ್ತು ಆರಾಮವನ್ನು ಯಾರು ಬಯಸುವರೋ ಅವರು ಏನು ಮಾಡಿದರೂ ತಮ್ಮ ಹಿತಕ್ಕಾಗಿ ಮಾಡುವರು. ದೇಶ ಮತ್ತು ಧರ್ಮದ ಸಲುವಾಗಿ ಏನನ್ನೂ ಮಾಡ ಲಾರರು.

ಅಂಭಿರಾಜ:— (ಪ್ರಾರ್ಥನಾಳ ಎದುರು ಬಂದು ನಿಂತು) ಹಾಗಾದರೆ ಏನು ಮಾಡಬೇಕು ನೀನೇ ಹೇಳು ?

ಪ್ರಾರ್ಥನಾ:— ನಿಮ್ಮ ಪ್ರಥಮ ಕರ್ತವ್ಯ ದೇಶದ ಸ್ವಾತಂತ್ರತೆಯನ್ನು ಉಳಿಸಿಕೊಳ್ಳುವದು, ಅದಕ್ಕಾಗಿ ನೀವು ಮಹಾರಾಜಾ ಪುರುರಾಜ ರೊಡನೆ ಕೂಡಿಕೊಂಡು, ಸಿಕಂದರನನ್ನೆ ಮರಿಸಬೇಕು.

ಅಂಭಿರಾಜ:— ಪುರು ರಾಜದೊಡನೆ ಕೂಡುವದು ಶಕ್ಯವಿಲ್ಲ ಅವನು ನಮ್ಮ ಶತ್ರು ಇದ್ದಾನೆ.

ಪ್ರಾರ್ಥನಾ:— ನಿಜ, ಪುರುರಾಜ ನಿಮ್ಮ ಸ್ವಂತ ಶತೃವಿದ್ದರೆ, ಸಿಕಂದ ರನು, ನಮ್ಮ ಮತ್ತು ನಿಮ್ಮ ರಾಜ್ಯದ ಶತೃ ಇದ್ದಾನೆ. ಇವರಿಬ್ಬ ರಲ್ಲಿ ಯಾವ ಶತೃವಿನಿಂದ ನಿಮ್ಮ ಮತ್ತು ದೇಶದ ಹಾನಿಯಿದೆ. ನೀವೇ ಆಲೋಚಿಸಿರಿ ಅಣ್ಣಾ !

**ಅಂಭಿರಾಜ:**— ನಾನು ಆಲೋಚಿಸಿದ್ದೇನೆ, ಆಲೋಚಿಸಿಯೇ ಸಿಕಂದರನೊಡನೆ ಮಿತ್ರತ್ವವನ್ನು ಹೊಂದಬೇಕೆಂದಿದ್ದೇನೆ.

**ಪ್ರಾರ್ಥನಾ:**— ನೀವು; ನಿಮ್ಮ ಯಾವ ಸ್ಥಿತಿಯಲ್ಲಿ ಸಿಕಂದರನೊಡನೆ ಮಿತ್ರತ್ವ ಸಂಪಾದಿಸಬೇಕೆಂದಿರುವಿರಿ! ಆಲೋಚಿಸಿದ್ದೀರಾ? ಅವನ ಶಕ್ತಿಗೆ ಬೆದರಿ ಸೋಲನ್ನೊಪ್ಪಿಕೊಂಡು ಮಿತ್ರನಾದರೆ,ಗುಲಾಮಗಿರಿ ಅಪಮಾನಗಳು ಪ್ರಾಪ್ತವಾಗುವವು. ಗೆದ್ದು ಮಿತ್ರನಾದರೆ ಸ್ವಾಭಿಮಾನದ ಉನ್ನತ ಸ್ಥಾನ ಮತ್ತು ಸ್ವಾತಂತ್ರ ದೊರೆಯುವದು. ಪುರು ಮಹಾರಾಜರೊಡನೆ ಕೂಡಿಕೊಂಡು, ಸಿಕಂದರನನ್ನೆದುರಿಸಿ ಗೆದ್ದರೆ; ನಿಮಗೆ ಸ್ವರಾಜ್ಯ ರಕ್ಷಕನೆಂದೂ, ಸಿಕಂದರನನ್ನು ಕೂಡಿಕೊಂಡು ಪುರುರಾಜನನ್ನು ಗೆದ್ದರೆ,ದೇಶದ್ರೋಹಿಯೆಂದೂ ಇಂದಿನ ಜನರೂ ಮುಂದಿನ ಪೀಳಿಗೆಯೂ ಕರೆಯದೆ ಇರದು.

**ಅಂಭಿರಾಜ:**— ಪ್ರಾರ್ಥನಾ ! ನೀನಿನ್ನೂ ಸಣ್ಣವಳು. ರಾಜಕಾರಣದ ನೀತಿ ನಿನಗಿನ್ನೂ ಗೊತ್ತಿಲ್ಲ. ಆದ್ದರಿಂದ ಈ ವಿಷಯದಲ್ಲಿ ವ್ಯರ್ಥ ತಲೆ ಕೆಡಿಸಿಕೊಳ್ಳಬೇಡ.

**ಪ್ರಾರ್ಥನಾ:**— ರಾಜಕಾರಣದ ನೀತಿಯೊಂದೇ ನಿಮಗೆ ಗೊತ್ತಿದೆ, ರೀತಿ ಗೊತ್ತಿಲ್ಲ. ಆಡಳಿತಗಾರರಿಗೆ ರಾಜಕಾರಣದ ರೀತಿ ಮತ್ತು ನೀತಿಗಳೆರಡೂ ಗೊತ್ತಿರಬೇಕು.

**ಅಂಭಿರಾಜ:**— ರೀತಿಯೆಂದರೇನು ?

**ಪ್ರಾರ್ಥನಾ:**— ನೀತಿಯ ಲಗಾಮು. (ಕಡಿವಾಣ)

**ಅಂಭಿರಾಜ:**— ನೀನು ಪುರು ರಾಜನನ್ನು ಇಷ್ಟೊಂದು ಹೊಗಳುವದಕ್ಕೆ ಕಾರಣವಾದರೂ ಏನು ?

**ಪ್ರಾರ್ಥನಾ:**— ಯಾರಲ್ಲಿ ಶೌರ್ಯವಿರುವದೋ ಅವನಲ್ಲಿ ಧೈರ್ಯವಿರುವದು. ಅಂಥವನು ತನ್ನ ದೇಶದ ಸಲುವಾಗಿ ತನ್ನ ಜೀವ ಮತ್ತು ಜೀವನಗಳನ್ನು ಪಣಕ್ಕೆ ಹಚ್ಚುವನು. ಅಂಥ ಮಹಾನುಭಾವನನ್ನು ನಾನೊಬ್ಬಳೇ ಏಕೆ; ಇಡೀ ನಾಡಿಗೆ ನಾಡೇ ಹೊಗಳುತದು.

**ಅಂಭಿರಾಜ:**— ಶೌರ್ಯ ಧೈರ್ಯಗಳಿಂದ ಕೂಡಿದ ಶಕ್ತಿ ಶಾಲಿಯಾದ ವೈರಿ ರಾಜನು. ನಮ್ಮರಾಜ್ಯದ ಅಕ್ಕಪಕ್ಕದಲ್ಲಿ ಎಲ್ಲಿಯವರೆಗಿರು

ವನೋ ಅಲ್ಲಿಯ ವರೆಗೆ ನಮ್ಮ ರಾಜ್ಯಕ್ಕೆ ಭಯತಪ್ಪಿದ್ದಲ್ಲ ಅಂತೆಯೇ ಸಿಕಂದರನನ್ನು ಕೂಡಿಕೊಂಡು ಪುರು ರಾಜನನ್ನು ಮುರಿಯಬೇಕೆಂದು ಆಲೋಚಿಸಿದ್ದೇನೆ. ಇದಕ್ಕೆ ರಾಜಕಾರಣದ ನೀತಿ ಒಪ್ಪಿಗೆ ಕೊಡುವದು.

**ಪ್ರಾರ್ಥನಾ:**— ಇದು ರಾಜಕಾರಣದ ರೀತಿ ಇಲ್ಲದ ನೀತಿಯು. ಅಂಣಾ! ನಿನಗೆ ಕತೆ ಕೇಳುವ ಚಟ ಬಹಳ, ಆದ್ದರಿಂದೊಂದು ಕತೆ ಹೇಳು ವೆನು ಕೇಳು?

**ಅಂಭಿರಾಜ:**— (ಸಿಟ್ಟಿನಿಂದ) ಹೂಂ.... (ತಲೆ ಹಾಕುತ್ತ) ಹೇಳು. ಏನ ಹೇಳತಿ ಹೇಳು.

**ಪ್ರಾರ್ಥನಾ:**— (ನಸುನಗುತ್ತ) ಒಮ್ಮೆ ಒಂದು ಜಂಗಲದಲ್ಲಿ ಕುದುರೆ ಮತ್ತು ಸಿಂಹಗಳ ನಡುವೆ ಯುದ್ಧ ನಡೆಯಿತು. ಆಗ ಕುದುರೆಯ ಶಕ್ತಿ ಕಡಿಮೆಯಾಗಿ ಅದು ಸೋತು ಓಡುವ ಪ್ರಸಂಗ ಬಂದಿತು. ಆಗ ಕುದುರೆ ಹೀಗೆ ಆಲೋಚನೆ ಮಾಡುತ್ತದೆ, ಹೇಗಾದರೂ ಮಾಡಿ ಈ ಸಿಂಹವನ್ನು ಸೋಲಿಸಲೇ ಬೇಕು. ಎಂದು ಆಲೋಚಿ ಸುವಷ್ಟರಲ್ಲಿಯೇ ಒಬ್ಬ ಮನುಷ್ಯನು ಅಲ್ಲಿಗೆ ಬಂದನು. ಅವನು ಕುದುರೆಯ ಪರಿಸ್ಥಿತಿಯನ್ನರಿತು ಕುದುರೆಗೆ ಹೀಗನ್ನುವನು:— ನಿನಗೆ ನಾನು ಸಹಾಯ ಮಾಡುವೆನು, ನೀನು ನಿಶ್ಚಯವಾಗಿ ಗೆದಿಯುವಿ. ಎಂದು ಹೇಳಲು ಕುದುರೆಯು ಸಂತೋಷದಿಂದ ಬಾಲವನ್ನೇ ಉಬ್ಬಿಸಿ ತನ್ನ ಕೃಪೆಯೆಂದಿತು. ಹಾಗಾದರೆ ನನ್ನನ್ನು ನಿನ್ನ ಡುಬ್ಬದ ಮೇಲೆ ಕೂಡ್ರಿಸಿಕೋ ಎಂದನು. ಆಗ ಅದು ಸಂತೋ ಷದಿಂದ ಅವನನ್ನು ತನ್ನ ಡುಬ್ಬದ ಮೇಲೆ ಕೂಡ್ರಿಸಿಕೊಂಡಿತು ಅಷ್ಟೊತ್ತಿಗೆ ಒಂದು ಮಂಗ ಬಂದು ಕುದುರೆಗಂದಿತು. ಮೂರ್ಖ! ಈಗ ಸಿಂಹ ಸೋತಿತು. ಆದರೆ ನೀನು ಮಾತ್ರ ಮೊದಲೇ ಸೋತಿ ರುವಿ ನೋಡು. ಎಂದು ಹೇಳಿ ಹೊರಟು ಹೋಯಿತು.

ಮಂಗ ಹೇಳಿದಂತೆ ಕುದುರೆಯು ಇಂದಿಗೂ ಮನುಷ್ಯನ ಆಳಾಗಿ ಉಳಿದಿದೆ. ಸಿಂಹವು ಇಂದಿಗೂ ಜಂಗಲದ ರಾಜನಾಗಿಯೇ ಉಳಿದಿದೆ

**ಅಂಭಿರಾಜ:**— ಇದರರ್ಥವೇನು ? ನಾನೂ ಒಂದು ಕುದುರೆ ಅನ್ನುವಿಯೇನು ?

**ಪ್ರಾರ್ಥನಾ:**— ಇಲ್ಲ, ಅಂಥ ಕುದುರೆಗಳು ಈಗಲೂ ಇರುವವು ಹೊರಗಿನ ಮನುಷ್ಯನನ್ನು ತಂದು, ತನ್ನ ಡುಬ್ಬದ ಮೇಲೆ ಕೂಡ್ರಿಸಿಕೊಂಡು, ಸಿಂಹವನ್ನು ಸೋಲಿಸಿದೆನೆಂದು ಸಂತೋಷದಿಂದ ತಿರುಗಿದ ಅಂದಿನ ಕುದುರೆಯ ಸ್ವಭಾವ, ಇಂದು ರಾಜರೆಂದೆನಿಸಿಕೊಳ್ಳುವ ಮಾನವರಲ್ಲಿ ಬಂದಿದೆಯಲ್ಲಾ ! ಎಂದು ವ್ಯಸನಪಡಬೇಕಾಗಿದೆ.

**ಅಂಭಿರಾಜ:**— (ಸಿಟ್ಟಿನಿಂದ) ನೀನು ಏನು ಮಾತಾಡುತ್ತಿರುವಿ ಎನ್ನುನದರ ಕಲ್ಪನೆಯಾದರೂ ನಿನಗಿರುವದೇನು ?

**ಪ್ರಾರ್ಥನಾ:**— (ಸಿಟ್ಟಿನಿಂದ) ಇದು ಕಲ್ಪನೆಯಲ್ಲ ಪ್ರತ್ಯಕ್ಷ ಘಟನೆ, ದೇಶ ಮತ್ತು ದೇಶದ ಹಿತಗಳೆರಡನ್ನೂ ಮಾರಲು ಪಣತೊಟ್ಟ ನಿಮ್ಮಂಥವರಿಗೆ ಏನು ಹೇಳಿದರೂ "ಬೋರಗಲ್ಲ ಮೇಲೆ ಘೋರ ಮಳೆಗರೆದಂತೆ," ಆದ್ದರಿಂದ ನೀನು ಇಂದಿನಿಂದ ನನ್ನ ಅಣ್ಣನಲ್ಲ. ನಾನು ನಿನ್ನ ತಂಗಿಯಲ್ಲ. (ಇನ್ನೂ ಸಿಟ್ಟಿನಿಂದ) ಮತ್ತು ನಿನ್ನ ಮನೆ ನನ್ನ ಮನೆಯಲ್ಲ, ನಿನ್ನ ಸೋಲು ಗೆಲವುಗಳಿಗಂತೂ ಎಳ್ಳಷ್ಟು ಬೆಲೆಯಿಲ್ಲ. (ಜೋರಾಗಿ ಕೈತಟ್ಟಿ) ನಮಸ್ಕಾರ ! (ಎಂದು ಸರಕ್ಕನೆ ತಿರುಗಿ ಹೊರಟು ಹೋಗುವಳು.)

**ಅಂಭಿರಾಜ:**— ನೀನು ಎಲ್ಲಿ ಹೋಗಬೇಕೆಂದಿರುವಿ ! ಅದನ್ನಾದರೂ ಆಲೋಚನೆ ಮಾಡಿರುವಿ ಏನು ?

**ಪ್ರಾರ್ಥನಾ:**— ನಿಮ್ಮಂಥ, ಹೇಡಿ ಮತ್ತು ದುರಭಿಮಾನಿಗಳ ದರ್ಶನವಾಗದಂಥ ಸ್ಥಳಕ್ಕೆ, ಅಲ್ಲಿ ಇಂಥ ಘಟನೆಗಳು ಹಿಂದೂ ನಡೆದಿರಬಾರದು. ಮುಂದೂ ನಡೆಯಕೂಡದು, ಅಂಥ ಸ್ಥಳಕ್ಕೆ ಹೋಗುವೆನು.

**ಅಂಭಿರಾಜ:**— ಪುರು ರಾಜನ ಕಡೆಗೇನು ?

**ಪ್ರಾರ್ಥನಾ:**— ಪುರುರಾಜನು ನಿಮ್ಮಂಥ ಹೇಡಿ ಮತ್ತು ದುರಭಿಮಾನಿಯಲ್ಲವೆಂದು ನೀವೇ ಒಪ್ಪಿಕೊಂಡಂತಾಯಿತು ಅಂದ ಮೇಲೆ ಅವನ ಹತ್ತರ ಹೋಗುವದು ತಪ್ಪಾಗಲಾರದು !

ಅಂಭಿರಾಜ:— ಅಣ್ಣಾ ನನ್ನು ಬಿಟ್ಟು ಅಣ್ಣನ ವೈರಿಯ ಕಡೆಗೆ ಹೋಗಲು ನಿನಗೆ ನಾಚಿಕೆ ಬರುವದಿಲ್ಲವೇ ?

ಪ್ರಾರ್ಥನಾ:— ಅಣ್ಣನು, ಹಿಂದುಸ್ಥಾನದ ವೈರಿಯಾದ; ಸಿಕಂದರನ ಕಡೆಗೆ ಹೋಗಲು ನಾಚಿಕೆ ಬರಲಿಲ್ಲ. ಆದರೆ ಹಿಂದುಸ್ಥಾನದ ಪುತ್ರ; ಪುರು ರಾಜನಲ್ಲಿಗೆ ತಂಗಿ ಹೋಗಲು ನಾಚಿಕೆ ಏತರದು ? ನೀವು ಭಾರತವನ್ನು ಪರಾಧೀನ ಮಾಡಲು ಪ್ರಯತ್ನ ಮಾಡಿದರೆ, ನಾನು ಅದೇ ಭಾರತವನ್ನು ಸ್ವಾಧೀನ ಪಡೆಯಲು ಪ್ರಯತ್ನಿಸುವೆನು.

ಪಡದೆ ಬೀಳುವದು.

—§§—

## ದೃಶ್ಯ ೬

ಸ್ಥಾನ: - ಸಿಕಂದರನ ಸೈನ್ಯ ಠಾಣೆಯಲ್ಲಿಯ ಒಂದು ರಸ್ತೆ.

ವೇಳೆ:— ಸಾಯಂಕಾಲ.

(ಸಿಕಂದರ ಮತ್ತು ಶೆಲ್ಯುಕಸರು ಮಾತಾಡುತ್ತ ಪ್ರವೇಶ ಮಾಡುವರು.)

**ಸಿಕಂದರ:—** ಹಿಂದುಸ್ಥಾನವು ಒಳ್ಳೇ ಸುಂದರ ದೇಶವಿದೆ. ಇದರ ಹೊಲ ಗದ್ದೆಗಳು, ತೋಟಪಟ್ಟಿಗಳು, ಹೊಳೆ ಹಳ್ಳಗಳು, ಎಷ್ಟು ಚಂದ ಕಾಣುತ್ತಿರುವವು. ದೇವರು ತನ್ನ ದಯಾ ದೃಷ್ಟಿಯನ್ನು ಇಲ್ಲಿ, ಹೆಚ್ಚೆ ಹೆಚ್ಚಿಗೂ ನಿಲ್ಲಿಸಿದ್ದಾನೆ. ಇಲ್ಲಿಯ ಹೊಲಗಳು ಬಂಗಾರವನ್ನೇ ಬೆಳೆ ಯುತ್ತವೆ. ಆಕಾಶವು ಮುತ್ತಿನ ಮಳೆ ಗರೆಯುತ್ತದೆ. ಗಾಳಿಯು ಸಂಗೀತವನ್ನು ಸುರಿಸುತ್ತಿದೆ. ದೇವರು ಈ ದೇಶವನ್ನು ನಿರ್ಮಾಣ ಮಾಡುವಾಗ ತನ್ನ ಕಲಾ ಕುಶಲತೆಗಳನ್ನೆಲ್ಲ ಇಲ್ಲಿಯೇ ಮುಗಿ ಸಿದಂತೆ ಕಾಣುತ್ತದೆ. ಸ್ವರ್ಗದ ಸುಖ ಸಂತೋಷಗಳನ್ನು ಭೂವಿಗೆ ಕಳಿಸಿ ಕೊಟ್ಟಂತಿದೆ. ಇಷ್ಟು ಸುಂದರ ಸ್ಥಳವಾದ ಇಲ್ಲಿ ಕೂಡ (ದುಃಖಾಶ್ರುಗಳಿಂದ ತುಂಬಿದ ಕಣ್ಣುಗಳಿಂದ) ನನಗೆ ಸಂತೋಷವಾ ಗಲಾರದು.

**ಶೆಲುಕ್ಯಸ:**— ನಮ್ಮ ಜೀವನದ ಎಲ್ಲ ಸುಖ ಸಂತೋಷಗಳು. ತಮ್ಮ ಒಂದೇ ಒಂದು ನಗೆಯಲ್ಲಿರುವವು. ನಿಮ್ಮ ಮುಖ ಮಂಡಲದ ಚಹರೆಯು ಸೈನಿಕನ ಶಕ್ತಿಯನ್ನು ಸೂರೆ ಮಾಡಬಲ್ಲದು.

**ಸಿಕಂದರ:**—ಶೆಲುಕ್ಯಸ ! ಬೆಳಗುತ್ತಿರುವ ಸೂರ್ಯ ಮತ್ತು ಚಂದ್ರರರು ದೇವ ದೂತನ ಎರಡು ದಿವ್ಯ ನೇತ್ರಗಳು ಆದರೂ ಅವರಿಗೂ ಕೂಡ ದೇವರು ಹಗಲು ಮತ್ತು ಕತ್ತಲೆಗಳೆಂಬ ಕಡು ವೈರಿಗಳನ್ನು ನಿರ್ಮಾಣ ಮಾಡಿದ್ದಾನೆ. ಯಾವನೊಬ್ಬನ ಮಹತ್ವ ಗೊತ್ತಾಗ ಬೇಕಾದರೆ ವಿರೋಧಿಯು ಮುಖ್ಯವಾಗಿರಬೇಕು ಈ ತತ್ವಕ್ಕಂಟಿ ಗೊಂಡೇ ದೇವರು ಪ್ರತಿಕೆಲಸ ಕೈಕೊಳ್ಳುವನು. ಕತ್ತಲೆಯೇಇಲ್ಲದ್ದಿದ್ದರೆ ಸೂರ್ಯನ ಮಹತ್ವ ಗೊತ್ತಾಗುತ್ತಿರಲಿಲ್ಲ. ಸೂರ್ಯ ಮತ್ತು ಅವನ ಪ್ರಕಾಶವಿಲ್ಲದಿದ್ದರೆ, ಚಂದ್ರನ ಮಹತ್ವ ಗೊತ್ತಾಗುತ್ತಿರಲಿಲ್ಲ.

**ಶೆಲುಕ್ಯಸ:**— ಇರಾಣದ ರಾಜಪುತ್ರನು ಸೂರ್ಯ ಚಂದ್ರರಿಗಿಂತಲೂ ಹೆಚ್ಚು ಕೀರ್ತಿ ಶಾಲಿಯೂ ಬಲಶಾಲಿಯೂ ಇರುವನು

**ಸಿಕಂದರ:**— (ನಗಲು ಪ್ರಯತ್ನಿಸುತ್ತ) ಕೇಳು ? ರಾಜಪುತ್ರನಿಂದ ನಿನಗೇನು ಬೇಕಾಗಿದೆ ಹೇಳು,

**ಶೆಲುಕ್ಯಸ:**— ತಮ್ಮ ಸೇವಕನು. ನೀವು ನಕ್ಕು ನಲಿಯುವದನ್ನು ನೋಡಬೇಕೆನ್ನುತ್ತಾನೆ. ನಾನೊಬ್ಬನೇ ನೀವು ನಕ್ಕು ನಲಿಯಬೇಕೆಂದು ಹೇಳುತ್ತಿಲ್ಲ. ನಮ್ಮ ಇಡೀ ಸೈನ್ಯವೇ ಹೇಳುತ್ತದೆ. ಸೈನ್ಯದ ಪ್ರತಿ ಸೈನಿಕನೂ ಹೇಳುತ್ತಿದ್ದಾನೆ. ಸೈನ್ಯದಲ್ಲಿ ಕೆಲಸ ಮಾಡುತ್ತಿರುವ ಪ್ರತಿ ಕೆಲಸಗಾರನೂ ಹೇಳುತ್ತಿದ್ದಾನೆ. ಮಹಾ ವೀರನಾದ ನಿಮ್ಮ ನಗೆನುಡಿಯೇ ನಮ್ಮೆಲ್ಲರ ಸರ್ವಶಕ್ತಿ.

**ಸಿಕಂದರ:**— ಅಂದರೇನು! ಬಾದಶಹನಿಗೆ ಸ್ವತಂತ್ರತೆಯೇ ಇಲ್ಲವೇನು? ನೀವು ಯಾವಾಗ ನಕ್ಕು ನಲಿಯಬೇಕೆನ್ನುವಿರೋ ಆಗ ಮಾತ್ರ ನಾನು ನಕ್ಕು ನಲಿಯಬೇಕು. ನೀವು ಯಾವಾಗ ಅಳಬೇಕೆನ್ನುವಿರೋ ಆಗ ಮಾತ್ರ ಕಣ್ಣೀರು ಸುರಿಸಬೇಕು. ಅರಸುತನದಲ್ಲಿಷ್ಟು ಹೇಡಿ ತನವಿದೆಯೇ ? ಅರಸುತನದಲ್ಲಿಷ್ಟು ಪರಾಧೀನತೆವಿದೆಯೆ?

ಜರ ಇದೆಯೆಂದು ಹೇಳಿದರೆ ನಾನು ಈಗಲೇ ಈ ಅರಸುತನವನ್ನು ಬಿಟ್ಟು ಬಿಡುವೆನು. ಈ ಹೇಡಿ ಮತ್ತು ಪರಾಧೀನತೆಯು ಸ್ಥಾನದಲ್ಲಿ ಬಿದು ಕೊಳೆಯಲಾರೆ.

ಶೆಲುಕ:— ದೇವರು, ಪ್ರಭುವಿನ ಮೇಲೆ ಕೃಪಾ ದೃಷ್ಟಿಯನ್ನಿಡಲಿ, ಪ್ರಭುವೇ ನಮ್ಮ ಕಣ್ಣು ಇದ್ದಂತೆ ಕಣ್ಣುಕುರುಡರಾದರೆ ಹಾಗೆ ಪ್ರಪಂಚವನ್ನು ಹೇಗೆ ನೋಡಲಾರವೋ ಹಾಗೆ ಪ್ರಭುವಿನ ಸುಖ ಸಂತೋಷಗಳು ಮಾಯವಾದರೆ ನಮ್ಮ ಹುರುಪು ಹುಮ್ಮಸಗಳೂ, ಒಕ್ಕಟ್ಟುಗಳೂ ಮಾಯವಾಗಿ, ನಮ್ಮ ಗುರಿ ಸಾಧಿಸಲಾರೆವು.

ಸಿಕಂದರ:— (ನಸುನಗುತ್ತ) ನಿನ್ನ ಸಂತೋಷಕ್ಕಾಗಿ ಏನು ಬೇಕೋ ಅದನ್ನು ಆತ್ಮ ವಿಶ್ವಾಸದಿಂದ ಹೇಳು.

ಶೆಲುಕ್ಯಸ:— ನಿಮ್ಮ ಮನೋ ವ್ಯಥೆಯನ್ನು ಮರೆಸಲು ಗಾಯನ ನರ್ತನಗಳು ಏರ್ಪಡಬೇಕು.

ಸಿಕಂದರ:— ಇವತ್ತಿನ ವರೆಗೂ ನನ್ನಲ್ಲಿ ನರ್ತನ ಗಾಯನಗಳ ವಿಚಾರವೇ ಉಂಟಾಗಿಲ್ಲ.

(ಶೆಲುಕ್ಯನು ನಿರಾಶನಾಗಿ ಹಿಂತಿರುಗಿ ಹೊರಡುವನು ಆಗ ಸಿಕಂದರನು ಅವನ ನಿರಾಶೆಯ ಲಕ್ಷಣ ಕಂಡು)

ಸಿಕಂದರ:— ತಡೆ !

(ಶೆಲುಕ್ಯನು ಹೊರಳಿ ಸಿಕಂದರನ ಕಡೆ ಮುಖ ಮಾಡಿ ನಿಲ್ಲುವನು.)

ಸಿಕಂದರ:— ಅದನ್ನು ಮನಃಪೂರ್ವಕವಾಗಿ ನಿಶ್ಚಯ ಮಾಡುವಿರೇನು ? ಹಾಗಾದರೆ ಹೋಗು! ನಿಮ್ಮ ಮನಸ್ಸಿಗೆ ಬಂದದ್ದನ್ನು ಏರ್ಪಾಡು ಮಾಡಿಕೊಳ್ಳಿರಿ. ನಿಮ್ಮ ಸಂತೋಷವನ್ನು ನಾನೇಕೆ ನಾಶ ಮಾಡಲಿ.

(ಶೆಲುಕ್ಯಸನು ಶರಣು ಹೊಡೆದು ಹೊರಟು ಹೋಗುವನು. ಸಿಕಂದರನು ಅವನನ್ನು ನೋಡುತ್ತಲಿರುವನು. ಅಷ್ಟರಲ್ಲಿ ಪಡದೆಯ ಹಿಂದಿನಿಂದ ಬಾರಿಸುವ ಶಬ್ದ ಕೇಳಿಬರುವದು. ಅಲ್ಲಿಗೆ ಹೊರಟು ಹೋಗುವನು ಆಗ ಇರಾಣದ ಮತ್ತು ಯುನಾನದ ಹುಡುಗೆಯರು ಹಾಡುತ್ತ ನರ್ತನ ಮಾಡುವದು ಕಂಡುಬರುವದು ಆಗ ಸಿಕಂದರನು ಬಂದು ಸಿಂಹಾಸನದ ಮೇಲೆ

ಕೂಡ್ರುವನು. ಮನಸ್ಸನ್ನು ಸಂತೋಷದತ್ತ ಹೊರಳಿಸಲು ಪ್ರಯತ್ನಿಸು ವನು. ಸರದಾರರು ಸಿಕಂದರನನ್ನು ನೋಡುವರು. ಸಿಕಂದರನು ನರ್ತನ ದವರನ್ನು ನೋಡುತ್ತಲಿರುವನು. ಆದರೆ ಅವನ ಮನಸ್ಸು ಮಾತ್ರ ಉದಾ ಸೀನತೆಯಲ್ಲಿರುವದು.)

— ಹಾಡು —

(ಎಲ್ಲ ಹುಡಿಗೆಯರು ಕೂಡಿ ಹಾಡುತ್ತ ನರ್ತನ ಮಾಡುವರು.)

ಕುಡಿ ಕುಡಿ ।

ಸರಾಯಿ ಕುಡಿ ।

ಮಧುರ ಸರಾಯಿ । ಮನಕೆ ಆರಾಂ ।

(ನರ್ತನ ಮಾಡುತ್ತಿರುವ ಹುಡಿಗೆಯರಲ್ಲಿಯ ಓರ್ವಳು ಹೂಜಿಯು ಲ್ಲಿಯ ಸರಾಯಿಯನ್ನು ಗ್ಲಾಸುಗಳಿಗೆ ಹಾಕಿ, ಒಂದು ಗ್ಲಾಸನ್ನು ಸಿಕಂದ ರನಿಗೆ ಒಯ್ದು ಕೊಡುವಳು. ಉಳಿದ ಹುಡಿಗೆಯರು ಒಂದೊಂದು ಗ್ಲಾಸಿ ನಂತೆ ಎತ್ತಿಕೊಂಡು ಹೋಗಿ ಪ್ರತಿಯೊಬ್ಬ ಸರದಾರರಿಗೆ ಕೊಡುವರು ಸಿಕಂದರನು ವಿಚಾರ ಮಗ್ನತೆಯಲ್ಲಿ ಸರಾಯಿಯನ್ನು ಕುಡಿಯುವದಿಲ್ಲ. ಸರಾಯಿಯ ಗ್ಲಾಸು ಕೈಯಲ್ಲಿ ಹಾಗೆ ಉಳಿಯುವದು. ಸಿಕಂದರನು ಕುಡಿಯದ್ದರಿಂದ ಉಳಿದ ಸರದಾರರೂ ಸಹ ಸರಾಯಿಯನ್ನು ಕುಡಿಯದೆ ಸುಮ್ಮನೆ ಕೂಡ್ರುವರು. ಎಲ್ಲರ ಕೈಯಲ್ಲಿಯೂ ಸರಾಯಿ ತುಂಬಿದ ಗ್ಲಾಸುಗಳು ಹಾಗೇ ಇರುವವು.)

— ಹಾಡು —

(ಎಲ್ಲ ಹುಡಿಗೆಯರು ಕೂಡಿ ಹಾಡುತ್ತ ನರ್ತನ ಮಾಡುವರು.)

ಕುಡಿ ಕುಡಿ ।
ಸರಾಯಿ ಕುಡಿ ।
ಮಧುರ ಸರಾಯಿ । ಮನಕೆ ಆರಾಂ ||ಪ||
ವಿಷಯದಲ್ಲಿ ವಿರಸವೇಕೆ? ।
ಸಂಗ ಸವಿ ಮೌನವೇಕೆ ? ।
ಹೃಷ್ಟಿಯಲ್ಲಿ ದುಃಖವೇಕೆ ? । ಕಣ್ಣಲ್ಲಿ ಕತ್ತಲೇಕೆ ||೧||

ಜಾಂಬಿನಲ್ಲಿ ಶರಾಯಿ ಇದೆ ।
ಬಾಯಿಗ್ಗಚ್ಚು ಈಗಲೆ, ।
ಈಗ ಇನ್ನೊಮ್ಮೆ ಅನ್ನದೆ, । ವ್ಯರ್ಥ ಯವ್ವನ ಕಳೆಯದೆ ||೨||
ಇಂದು, ಈಗ, ಸುಗ್ಗಿ ಇದೆ, ।
ಸೌಂದರ್ಯದಲ್ಲಿ ಸೊಬಗಿದೆ ।
ಇಂದಿನಂತೆ ಮುಂದೆ ಇರದು । ಯವ್ವನ, ಒಂದೇ ಸವ ||೩||

(ಸಿಕಂದರನ ಮನಸ್ಸು ಸ್ವಸ್ಥವಿಲ್ಲದ್ದರಿಂದ ಅವನಿಗೆ ನರ್ತನ ರುಚಿಸುವದಿಲ್ಲ. ಅವನು ಒಮ್ಮೆಲೇ ಎದ್ದು ನಿಲ್ಲುವನು. ಆಗ ಗಾಯನ ನರ್ತನಗಳು ಬಂದಾಗುವವು. ಸಿಕಂದರನು ಸಿಂಹಾಸನದಿಂದಿಳಿದು ಹೊರಗೆ ಬರುವನು. ಅವನ ಹಿಂದಿಂದ ಯುಮನೀಸನೂ ಬರುವನು. ಸಿಕಂದರನು ತಟ್ಟನೆ ಹೊರಳಿ ನಿಂತು ಯುಮನೀಸನನ್ನು ನೋಡುತ್ತ)

**ಸಿಕಂದರ:**— ಯುಮನೀಸ ! ಹಾಡು ಕುಣಿತಗಳನ್ನು ಬಂದುಮಾಡುವವಶ್ಯವಿಲ್ಲ, ನಿಮ್ಮ ಮತ್ತು ನಿಮ್ಮ ಜನರ ಸಂತೋಷಕ್ಕಾಗಿ ಅದು ನಡೆಯಲಿ.

**ಯುಮನೀಸ:**— ಮಹಾವೀರ ! ನಿಮ್ಮ ಮನಸ್ಸು ಸಂತೋಷದಲ್ಲಿಲ್ಲದೆ, ನಮಗೆ ಸಂತೋಷವಾಗುವದಾದರೂ ಹೇಗೆ ? ತಾವು ಎಂದು ಸಂತೋಷದಲ್ಲಿರುವಿರೋ; ಅಂದು ನಮಗೂ ಸಂತೋಷವಾಗುವದು.

**ಸಿಕಂದರ:**— ಒಡೆಯನ ಪ್ರಕೃತಿಯೇ ಸ್ವಸ್ಥವಿಲ್ಲದಿದ್ದರೆ; ಆಗೇನು ಮಾಡುವಿರಿ ?

**ಯುಮನೀಸ:**— ನಮ್ಮ ಒಡೆಯನು, ಇರಾಣದ ರಾಜಪುತ್ರನಿರುವನು.

**ಸಿಕಂದರ:**— (ನಗುವದಕ್ಕೆ ವ್ಯರ್ಥ ಪ್ರಯತ್ನ ಮಾಡಿ) ಅಂದರೆ ನಿಮ್ಮ ಇಚ್ಛೆಯು, ನಾನು ಯಾವಾಗಲೂ ನಕ್ಕು ನಲಿಯುತ್ತಿರಬೇಕು. ಎಂದು ಇರುವದೇನು ?

**ಯುಮನೀಸ:** – ಅದನ್ನು ನಾನೊಬ್ಬನೇ ಕೇಳುವದಿಲ್ಲ. ನಮ್ಮ ಇಡೀ ಸೈನ್ಯವೇ ಕೇಳುತ್ತದೆ. ಸೈನ್ಯದ ಪ್ರತಿಯೊಬ್ಬ ಸಿಪಾಯಿಯೂ ಕೇಳು

ವನು ನಮಗೆ ಜಯ ಸಿಗಲಿ ಸಿಗದಿರಲಿ ನೀವು ಮಾತ್ರ ನಗುತ್ತಿರ ಬೇಕು. ಅಂದರೆ ಮಾತ್ರ ನಮ್ಮಲ್ಲಿ ಉತ್ಸಾಹ ಉಕ್ಕುವದು.

**ಸಿಕಂದರ:**— ನಾನು ಸಂತೋಷವಾಗಿರಬೇಕೆಂದು ನೀವು ಇಚ್ಛಿಸುತ್ತಿದ್ದರೆ, (ಯಮನೀಸನ ಬುಜ ಹಿಡಿದು ಹೊರಳಿಸಿ) ಹೋಗಿರಿ ಪುನಃ ನರ್ತನ ಗಾಯನಗಳನ್ನು ಸುರುವು ಮಾಡಿರಿ, ಮಲಗಿದ ಮನಸ್ಸನ್ನು ಬಡಿದೆಬ್ಬಿಸಿ ಅದರೊಡನೆ ಚಿನ್ನಾಟವಾಡಿರಿ, ನನ್ನ ಮನಸ್ಸು ಸಂತೋಷವಾಗುವಂತೆ ನಾನೂ ಪ್ರಯತ್ನಿಸುವೆನು.

(ಯಮನೀಸನು ಸಲಾಮು ಮಾಡಿ ಹೋಗುವನು ನರ್ತನ ಗಾಯನ ಗಳು ಪ್ರಾರಂಭವಾಗುವವು )

— ಹಾಡು, —

**ಕುಡಿ ಕುಡಿ ।**
**ಸರಾಯಿ ಕುಡಿ ।**
**ಮಧುರ ಸರಾಯಿ । ಮನಕೆ ಆರಾಮು ॥**

(ಪಡದೇಬೀಳುವದು. ಸಿಕಂದರನು ಅತ್ತಿತ್ತ ತಿರುಗಾಡುತ್ತಿರುವಾಗ, ಪುನಃ ಪಡದೆ ಏಳುವದು. ಅತ್ತಿತ್ತ ಆಡ್ಡಾಡುತ್ತಿದ್ದ ಸಿಕಂದರನು ಗೋಡೆಗೆ ತೂಗುಹಾಕಿದ್ದ, ರುಕ್ಸಾನಳ ಫೋಟೋದಮುಂದೆ ಬಂದು ನಿಲ್ಲುವನು. ಅದನ್ನು ಏಕಚಿತ್ತದಿಂದ ನೋಡುತ್ತ ಹೀಗನ್ನುವನು.)

**ಸಿಕಂದರ:**— ನಾನು ಉದಾಸೀನನಾಗಿರುವುದೇಕೆ ? ನಿನಗೆ ಗೊತ್ತಿದೆಯೆ? ಇಲ್ಲ! ನಿನಗೆ ಗೊತ್ತಾಗಿಲ್ಲ. ಗೊತ್ತಾಗಿದ್ದರೆ ನನ್ನನ್ನು ಬಿಟ್ಟು ದೂರ ವಿರುತ್ತಿರಲಿಲ್ಲ. ಇರಲಿ, ಕೇಳು! ನೀನು ನನ್ನೆದುರು ಇಲ್ಲದ್ದರಿಂದ ಉದಾಸನಾಗಿದ್ದೇನೆ ನಿನ್ನ ಹೊರ್ತು ಜಗತ್ತಿನ ಯಾವಸ್ತ್ರೀಯೂ ನಿನಗಿಂತ ಸುಂದರಳಾಗಿ, ನನಗೆ ಕಾಣುವದಿಲ್ಲ. ನನ್ನ ಕಿವಿಗಳು ನಿನ್ನ ಮಧುರ ಹಾಡಿನ ಹೊರ್ತು ಇನ್ನಾವ ಸ್ತ್ರೀಯ ಹಾಡನ್ನು ಕೇಳಿದರೂ, ಆನಂದಿಸಲಾರವು. ನನ್ನ ಕಣ್ಣುಗಳು ನಿನ್ನ ನರ್ತನದ ಹೊರ್ತು ಇನ್ನಾವಸ್ತ್ರೀಯ ನರ್ತನವನ್ನು ಕಂಡರೂ ಸಂತೋಷಪಡಲಾರವು. ಹೀಗಿದ್ದೂ ನನ್ನ ಜನರು ಸಾಧಾರಣ ಸ್ತ್ರೀಯರ

ನರ್ತನ ಗಾಯನಗಳಿಂದ ನನ್ನನ್ನು ಸಂತೋಷಪಡಿಸಲು ಪ್ರಯತ್ನಿ ಸುವರು ನನ್ನನ್ನು ಜಗದೇಕವೀರನೆಂದೂ, ಮಹಾಶೂರನೆಂದೂ ಜಗತ್ತನ್ನೇ ಗೆದೆಯುವವನೆಂದೂ ಕರೆಯುವರು ಜನರು ನನ್ನನ ಕಂಡು ಅಂಜುವರು, ಅಳಕುವರು. ಆದರೆ ಇಲ್ಲಿಯ ನನ್ನ ಸ್ಥಿ ಯನ್ನು ಯಾರುಬಲ್ಲರು! ನಾನು ನಿನ್ನಂಥ ಮಾನವ ತರುಣಿ ಯ ಮೋಹ ಪಾಶದಲ್ಲಿ ಮಗ್ನನಾಗಿರುವದು ಯಾರಿಗೆಗೊತ್ತು. ನೀ ನಿಲ್ಲದ ಜಗತ್ತು ನನಗೆ ಬಹು ಚಿಕ್ಕದಾಗಿ ತೋರುತ್ತದೆ ನನ್ನ ರಾತ್ರಿಯ ಶುಭನಿದ್ರೆಯನ್ನೇ ನೀನು ಕಸಿದುಕೊಂಡಿರುವಿ. ಆ ಪಳುತ್ತಿರುವ ನನ್ನ ಮನಸ್ಸಿನ ಅಶಾಂತತೆಯ ತೆರೆಗಳು, ಚಿತ್ತವನ್ನೆ ತೂರಿಬಿಗೆಯಲು ಪ್ರಯತ್ನಿಸುವವು ನಾನು ಬಾದಶಹನಾಗಿ ದಿದ್ದರೆ ಸ್ವೇಚ್ಛೆಯಿಂದ ನಿನ್ನಲ್ಲಿಗೆ ಹಾರಿಬರುತ್ತಿದ್ದೆ. ಆದರೆ ... ನಾನು ಜಗತ್ತನ್ನೇ ಗೆದೆಯಬಲ್ಲೆನಾದರೂ ನಿನ್ನಮೇಲಿನ ವಾ ಮೋಹವನ್ನು ಗೆದೆಯದ ಹೇಡಿಯಾಗಿದ್ದೇನೆ ನನ್ನ ಗುರುವಾ ಅರಸ್ತು " ಜಗತ್ತನ್ನು ಗೆದೆಯುವ ಮೊದಲು, ನಿನ್ನನ್ನೇ ನೀನ ಗೆದೆ " ಎಂದು ಹೇಳಿದ್ದು ಅನುಭವಸಿದ್ಧ ಅಮೃತನುಡಿಯದೆ

## ದೃ.ಶ. ೯

ಳ:— ಬಡವರ ಓಣಿ. ಸಮಯ — ಸಾಯಂಕಾಲ

ಬಡವರ ವಸ್ತಿಯಲ್ಲಿಯ ಒಂದು ಬೈಲಲ್ಲಿ, ಜನರು ಒಟ್ಟುಗೂಡಿ ದ್ದಾರೆ. ಅಂದು ಹಬ್ಬವಾದ್ದರಿಂದ ಎಲ್ಲರೂ ಹೊಸ ವಸ್ತ್ರಾಭರಣಗಳನ್ನು ಧರಿಸಿ ಸುಖ ಸಂತೋಷದಲ್ಲರುವರು. ಮಧ್ಯದಲ್ಲಿ "ಸುಧಾ" ಎಂಬ ತರು ಣಿಯು ಹಾಡುತ್ತ ನಾಚು ಮಾಡುತ್ತಿದ್ದಾಳೆ. ಉಳಿದವರೆಲ್ಲರೂ ಸುತ್ತುವ ರೆದು ಸ್ತಬ್ಧರಾಗಿ ಕೂತು ಕೇಳುತ್ತಿದ್ದಾರೆ. ಕೇಳುವವರ ಗುಂಪಿನಲ್ಲಿ ರುಕ್ಸಾನಳೂ ಸಹ ಇರುವಳು. ಆವಳು ಇರಾಣಿ ಉಡುಪಿನಲ್ಲಿದ್ದು ಹೆಂಣು

ಮಕ್ಕಳ ಸಂಗಡ ಕುಳಿತಿರುವಳು. ಈ ಕಾರಣದಿಂದ ಆಕೆಯು ಕೇದಿನ ಳಿಂದ ಅಲ್ಲಿಯೇ ವಾಸವಾಗಿದ್ದಾಳೆಂದು ಕಂಡುಬರುವದು.

— ಹಾಡು —

ತಂದು ಕೊಡು ಸೀರಿನ । ಪಂಚಮಿಯ ಸೀರಿನ ।
ನನಗೊಂದು ಸೀರಿನ । ಹೊಸ ಸೀರಿನ ॥ಪಲ್ಲ॥
ರೇಸ್ಮಿಯ ಸೀರಿನ । ತೆನಿಯ ತಿರುವಿದ ಸೀರಿನ ।
ಹಸಿರು ಬಂಣದ ಸೀರಿನ । ಚಂದಾದ ಸೀರಿನ ।
ತಂದು ಕೊಡು ಸೀರಿನ ॥೧॥

(ವಾದ್ಯದೊಡನೆ ನಾಚು ನಡೆದಿರುತ್ತದೆ. ಗಣೇಸಿ ಮತ್ತು ಮುರಲಿ ಯರು ಮಾತಾಡತೊಡಗುವರು.)

**ಗಣೇಸಿಃ**— ನೋಡಿದ್ಯಾ ? ಮುರಲಿ! ನಮ್ಮವ್ವಾ ಎಷ್ಟು ಚಲೋ ಕುಣಿ ತಾಳ ನೋಡು

**ಮುರಲಿ:**— ಹೋಗೋ ! ಹೋಗು. ಇದಕಿಂತ ಚಲೋ ನಮ್ಮ ಅಂವ ಕುಣಿತಾಳ, ನಿನಗೆ ಗೊತ್ತಿಲ್ಲ ಇನ್ನೂ.

**ಗಣೇಸಿ:**— ಹಾಂ.... ನಿಮ್ಮವ್ವಾ ಅಷ್ಟು ಚಲೋ ಕುಣಿತಾಳ! ಬಾಯಾ ಗರ ಹಲ್ಲಿಲ್ಲ, ಹೊಟ್ಟೆರ ಸಾಣದಿಲ್ಲ. (ಜಸರಾಮನನ್ನು ಕುರಿತು) ಯಾಕೆಪ್ಪಾ ! ಮುರಲಿ ಅವ್ವ ಅವ್ವನಕಿಂತ ಚಲೋ ಕುಣಿತಾಳ ?

**ಜಸರಾಮ:**— (ಗಣೇಸಿಯ ತಲೆಗೊಂದು ಏಟು ಕೊಟ್ಟು) ಸುಮ್ಮನ ಕುಂಡ್ರಾಕ ಆಗುದಿಲ್ಲೇನೋ ಮೂರ್ಖಾ !

("ಸುಧಾ" ಮತ್ತೆ ಹಾಡತೊಡಗುವಳು )

— ಹಾಡು —

ವಸಂತ ಋತು ಬಂದಿತು ।
ಕಾಡು ಕಂಠಿ ಚಿಗಿಯಿತು ।
ಬರಲು ಬೈಲು ಹಸಿರಾಯಿತು ।
ಪರಿಮಳ ಪುಷ್ಪ ಅರಳಿತು ।

ಶ್ರಾವಣ ಮಾಸ ಬಂದಿತು
ಮಾನವನ ಮನ ಅರಳಿತು
ಮೌನವೆಲ್ಲ ಮುರಿಯಿತು
ಪ್ರೇಮ ಪುಷ್ಪ ಅರಳಿತು

(ಗಾಯನ ನರ್ತನಗಳು ಮುಗಿಯುವವು. ತರುಣಿಯರು ತಮ್ಮತಮ್ಮ ಸಹೋದರರಿಗೆ ರಕ್ಷಾ ಕಟ್ಟುವರು. ಅವರು ರೊಕ್ಕ ಕೊಡುವರು. ಮುರಲಿಗೆ ಸಹೋದರರಾರೂ ಇರದ್ದರಿಂದ ಅವನಿಗಾರೂ ರಕ್ಷಾ ಕಟ್ಟುವದಿಲ್ಲ. ಆದ್ದರಿಂದ ಅವನು ಅಳತೊಡಗುವನು. ಅವನ ಅಮ್ಮಳು ಅವನನ್ನು ಸಮಾಧಾನ ಪಡಿಸುವಳು. ರುಕ್ಸಾನಳು ಕುತೂಹಲದಿಂದ ನೋಡುವಳು.

**ಅಮ್ಮ:—** ಅಳಬೇಡ ಮಗು! ಅಳಬೇಡ.

**ರುಕ್ಸಾನಾ:—** ಇವನ್ಯಾಕೆ ಅಳುವನು ?

**ಸುಧಾ:—** ಇಂದು ರಕ್ಷಾಬಂಧನ ಅದೆಯಲ್ಲವೆ; ರಕ್ಷಾಬಂಧನ! ಇಂದು ಪ್ರತಿಯೊಬ್ಬನಿಗೂ ಅವನ ತಂಗಿಯು ರಕ್ಷಾ ಕಟ್ಟುವಳು.

**ರುಕ್ಸಾನಾ.** ಯಾರಿಗಾದರೂ, ತಂಗಿ ಇಲ್ಲದಿದ್ದರೆ ?

**ಸುಧಾ:—** ಯಾವಳು ರಕ್ಷಾ ಕಟ್ಟುವಳೋ ಅವಳೇ ಅವನ ತಂಗಿಯಾಗುವಳು.

**ಮುರಲಿಯ ಕಾಕಾ:—** ನೋಡು ಮಗು ! (ಮುರಲಿಯನ್ನು ಸಮಾಧಾನ ಪಡಿಸುತ್ತ) ದೇವರ ಮೇಲೆ ಯಾರ ಒತ್ತಾಯವೂ ನಡೆಯಲಾರದು. ನಮ್ಮ ಮಹಾರಾಜರಿಗೆ ಸರ್ವ ಸಂಪತ್ತುಗಳೂ ಇರುವವು. ಆದರೆ ಸಹೋದರಿಯರು ಮಾತ್ರ ಇಲ್ಲ. ಇದ್ದರೆನ್ನುವ ಗುರ್ತುಕೂಡಾ ಇಲ್ಲ. ಯಾಕಂದರೆ ಈವರೆಗೂ ಅವರಿಗೆ ಯಾರೂ ರಕ್ಷಾಕಟ್ಟಿರುವದಿಲ್ಲ. ಈ ವಿಷಯದಲ್ಲಿ ನೀನು ಮತ್ತು ಮಹಾರಾಜರು ಸಮಾನ ದುಃಖಿಗಳಾಗಿದ್ದೀರಿ.

**ರುಕ್ಸಾನಾ:—** ( ಆಶ್ಚರ್ಯದಿಂದ ) ಏನು ? ಮಹಾರಾಜರಿಗೆ ಅಕ್ಕತಂಗಿಯರಿರುವದಿಲ್ಲವೆ. ( ಎಂದು ಆಲೋಚಿಸುತ್ತ ಹೋಗುವಳು )

## ದೃಶ್ಯ ೧೦

### ಸ್ಥಳ:— ಪುರು ಮಹಾರಾಜರ ಅರಮನೆ.
### ಸಮಯ:— ಮುಂಜಾನೆ

( ಮಹಾರಾಜ ಪುರು ಮತ್ತು ಅವರ ಮಹಾರಾಣಿ ಶರಿತಾ ದೇವಿಯರು ಮಾತಾಡುತ್ತಲಿದ್ದಾರೆ. )

**ಶರಿತಾ:**— ಅಮರ ಮತ್ತು ಸಮರರಿಗೆ ರಕ್ಷಾಕಟ್ಟಿ ತಂಗಿಯಾಗೆಂದು ಪ್ರಾರ್ಥನಾಳಿಗೆ ಯಾಕೆ ಹೇಳಬಾರದು ?

**ಪುರು:**— ಶರಿತಾ ರಾಣಿ ! ನೀನು ಬಹಳ ತಪ್ಪು ಮಾಡುತ್ತಿ.

**ಶರಿತಾ:** — ( ಹೆದರುತ್ತ ) ಅದೇನು ? ಮಹಾರಾಜ!

**ಪುರು:**— ನೀನು ಯಾವಾಗಲೂ, ನಾನು ಮನಸ್ಸಿನಲ್ಲಿ ಮಾಡಿದ್ದನ್ನೇ ಮಾತಾಡಿಬಿಡುವಿ. ನಾನೂ ಅದನ್ನೇ ಆಲೋಚಿಸಿದ್ದೆ. ( ಮಹಾರಾಣಿಯು ಸಂತೋಷಿತಳಾಗುವಳು. ) ಹಾಗಾದರೆ ಪ್ರಾರ್ಥನಾಳಿಗೆ ಕರೆದುಕೊಂಡು ಬರಲುಯಾರನ್ನಾದರೂ ಕಳಿಸು.

**ಶರಿತಾ:** — ಮಹಾರಾಜರ ಆಜ್ಞೆಯ ಪಾಲನೆಯು,ಮೊದಲೇ ಮುಗಿದಿದೆ

**ಪುರು**— (ಬರುವ ನಗೆಯನ್ನು ತಡೆಯಲು ಪ್ರಯತ್ನಿಸುತ್ತ) ನಾನು ಆಜ್ಞೆ ಮಾಡುವ ಮೊದಲೇ, ಈ ಆಜ್ಞೆಯ ಪಾಲನೆಯಾಗಿದೆಯು ಲ್ಲವೆ? ಒಂದು ವೇಳೆ ಈ ಆಜ್ಞೆಯನ್ನು ನಾನು ಮಾಡದಿದ್ದರೆ ?

**ಶರಿತಾ:**— ಮಹಾರಾಜರು ಯಾವ ಆಜ್ಞೆಯನ್ನು ಮಾಡಬೇಕೆಂದಿರು ವರೋ ಅದನ್ನು ನಾನೇ ಮಾತಾಡಿ ಬಿಡುವೆನೆಂದು, ನೀವೇ ಹೇಳ ಲಿಲ್ಲವೆ ?

(ಮಹರಾಜರು ಗಹಿಗಹಿಸಿ ನಗುವರು. ಅಷ್ಟರಲ್ಲಿ ಪ್ರಾರ್ಥನಾ ಬರು ವದನ್ನು ಇಬ್ಬರೂ ನೋಡಿ ಸುಮ್ಮನಾಗುವರು.)

**ಶರಿತಾ:**— (ಪ್ರಾರ್ಥನಾಳಿಗೆ) ಬಾ ಮಗಳೆ ಬಾ !

(ಪ್ರಾರ್ಥನಾ ಬಂದು ಇಬ್ಬರ ಎದುರಲ್ಲಿ ನಿಂತುಕೊಳ್ಳುವಳು)

**ಪುರು:**— (ಮಹಾರಾಣಿಗೆ) ನಾನು ಹೇಳಲಿ ?

ಚರಿತಾ:- ನಾನು ಹೇಳುವೆನು. (ಪ್ರಾರ್ಥನಾಳನ್ನು ಕುರಿತು) ಕೇಳು ಮಗಳೆ! ಇಂದು ರಕ್ಷಾ ಕಟ್ಟುವ ದಿನವಿದೆ. ಅಕ್ಕ ತಂಗಿಯರು ಅಣ್ಣ ತಮ್ಮಂದಿರಗೆ ರಕ್ಷಾ ಕಟ್ಟುವರು ಆದರೆ ನಮ್ಮ ರಾಜಕುಮಾರರಿಗೆ ಅಕ್ಕ ತಂಗಿಯರಾರೂ ಇಲ್ಲ, ನಿಮ್ಮಣ್ಣನೂ ಇಲ್ಲಿಲ್ಲ ಆದ್ದರಿಂದ........

ಪುರು:— (ನಡುವೆ ಬಾಯಿ ಹಾಕಿ) ನೀನು ಅವರಿಗೆ ರಕ್ಷಾ ಕಟ್ಟಿಬಿಡು. ಅಂದರೆ ಅವರಿಗೆ ತಂಗಿ ಸಿಕ್ಕಂತಾಯಿತು ನಿನಗೆ ಅಣ್ಣಂದಿರು ಸಿಕ್ಕಂತಾಗುವದು

ಚರಿತಾ:- (ಎರಡು ರಕ್ಷಾಗಳನ್ನು ಆಕೆಗೆ ಕೊಡುತ್ತ) ತಗೊ ಮಗಳೆ, ಈ ಕೆಲಸವನ್ನು ತೀವ್ರ ಮುಗಿಸು

(ಪ್ರಾರ್ಥನಾ ಹೊರಟು ಹೋಗುವಳು)

ಪುರು:- ನಡಿ, ಈ ವರೆಗೂ ಬರಿ ಗಂಡುಮಕ್ಕಳುಳ್ಳವರೇ ಆಗಿದ್ದೆವು! ಇಂದು ಹೆಣ್ಣುಮಗಳುಳ್ಳವರೂ, ಆದೆವು. ಹೆಣ್ಣುಮಕ್ಕಳಿಲ್ಲದಮನೆಗೆ ಶೋಭೆ ದೊರೆಯಲಾರದು. ಯಾವ ಮನೆಯಲ್ಲಿ ಅಣ್ಣತಂಗಿಯರ ಪ್ರೀತಿಯ ಜಗಳಗಳು ಇರುವದಿಲ್ಲವೋ, ಆ ಮನೆ ಮಕ್ಕಳಿರುವ ಮನೆಯಾಗಲಾರದು ತಗೊ, ಜಗಳ ಚಾಲು ಆಗಿಯೇ ಬಿಟ್ಟಿತು ನೋಡು! ನಡಿ, ಸ್ವಲ್ಪ ಮರೆಗೆ ನಿಂತು ನೋಡೋಣ

(ಇಬ್ಬರೂ ಮರೆಗೆ ನಿಂತುಕೊಳ್ಳುವರು. ಅಷ್ಟರಲ್ಲಿ ರಾಜಕುಮಾರ ಸಮರ ಮತ್ತು ಪ್ರಾರ್ಥನಾರು ಓಡುತ್ತ ಬರುವರು.)

ಸಮರ:— ನೀನು ತಂದಿರುವದಾದರೂ ಏನು ? ತೋರಿಸು.

ಪ್ರಾರ್ಥನಾ:· ತೋರಿಸತೇನಿ ಮಹಾರಾಯರ! ತೋರಿಸತೇನಿ. (ಮುರುಕ ಮಾಡುತ್ತ ಕೈಮಾಡಿ) ಅಲ್ಲಿ ಕೂತುಕೊಳ್ಳಿರಿ.

ಸಮರ:— (ಕೂತುಕೊಂಡು) ಹೂಂ ಕೂಳಿತುಕೊಂಡೆ....!

ಪ್ರಾರ್ಥನಾ:— ಬಹಳ ದಣಕೊಂಡಿರಿ, ಸ್ವಲ್ಪ ಆರಾಂ ತಗೊಳ್ಳಿರಿ.

ಸಮರ:— ಆದಿರಲಿ, ಏನ ತಂದಿ ತೋರಿಸು ಮೊದಲು

ಪ್ರಾರ್ಥನಾ:— (ನಾಚಿಕೆಯಿಂದ ತಲೆ ತಗ್ಗಿಸಿ) ಮಹಾರಾಣಿಯವರು ಹೀಗೆ ಹೇಳಿದರು ... ಹೀಗೆಹೇಳಿದರು ರಾಜಕುಮಾರರಿಗೆ ರಕ್ಷಾ, ಕಟ್ಟು ಎಂದು ಹೇಳಿದರು ರಕ್ಷಾ ಕೊಟ್ಟಿದ್ದಾರೆ

ಸಮರ:— (ಉತ್ಸಾಹ ಕುಂದಿದವನಾಗಿ) ರಕ್ಷಾನೆ ?

ಪ್ರಾರ್ಥನಾ:— ಹೌದು ರಕ್ಷಾ !....

ಸಮರ:— (ಖಿನ್ನ ಮನಸ್ಸಿನಿಂದ ಕೈ ಮುಂದೆಮಾಡಿ) ಹಾಗಾದರೆ ಕಟ್ಟಿ ಬಿಡು.

ಪ್ರಾರ್ಥನಾ:— (ರಕ್ಷಾ ಕೊಡುತ್ತ) ನೀವೆ ಕಟ್ಟಿಕೊಳ್ಳಿರಿ. ನಾ ಯಾಕೆ ಕಟ್ಟಲಿ ! ರಕ್ಷಾ ಕಟ್ಟಿ ತಂಗಿಯಾಗೂದು ನನಗೆ ಬೇಡ.

ಸಮರ:— ಹಾಗಾದರೆ ಮಹಾರಾಜರಿಗೇನು ಹೇಳಲಿ ?

ಪ್ರಾರ್ಥನಾ:— ನಿಮ್ಮ ಮನಸ್ಸಿಗೇನು ಬರುವದೋ ಅದನ್ನು ಹೇಳಿರಿ. (ಎಂದು ಹೇಳಿ ಹೊರಟು ಹೋಗುವಳು. ಅಮರನು ಬಂದು ಸಮರನ ಕೈಯಲ್ಲಿಯ ರಕ್ಷಾ ಕೈಗೆತ್ತಿಕೊಂಡು ಲಕ್ಷಕೊಟ್ಟು ನೋಡ ತೊಡಗುವನು.)

ಸಮರಃ— (ಗಾಬರಿಗೊಂಡು) ಬಾ, ತಮ್ಮಾ!

ಅಮರ:— ಅಂಣ್ಣಾ! ಇಂದೊಂದು ಮಂಗಲಮಯ ಸುದ್ದಿ ಸಿಕ್ಕಿತು.

ಸಮರಃ— (ಗಾಬರಿಯಿಂದ) ಮಂಗಲಮಯಸುದ್ದಿ? ಯಾರಿಗೆ ಸಿಕ್ಕಿತು?

ಅಮರಃ— ಎಲ್ಲರಿಗೂ,

ಸಮರಃ— ನನಗಿದರ ಅರ್ಥವಾಗಲೊಲ್ಲದು.

ಅಮರಃ— ನಿಮಗೆ ತಿಳಿಯಲಿಲ್ಲವೆ ?

ಸಮರಃ— ಇಲ್ಲ

ಅಮರ:— ಹಾಗಾದರೆ, ನಾನು ತಿಳಿಸುವೆನು ಕೇಳಿರಿ. ನಿಮಗೆ ಹೆಂಡತಿ ದೊರೆಯುವ ಮಂಗಳಸುದ್ದಿ. ನನಗೆ ಅತ್ತಿಗೆ ದೊರೆಯುವ ಸುದ್ದಿ. ತಂದೆಯವರಿಗೆ ಸೊಸೆ.... .......

ಸಮರ:— ಹತ್!

ಅಮರಃ— ಈಗ "ಹತ್" ಎಂದು ಮುಚ್ಚಿಕೊಳ್ಳಲು ಪ್ರಯತ್ನಿಸಿದರೆ ಮುಚ್ಚುವದೆ? ಇಂದು, ನನ್ನ ಬಾಯಲ್ಲಿದ್ದ ಈ ಮಾತು, ನಾಳೆ ಇಡಿ ಊರ ಜನರ ಬಾಯಲ್ಲಿರುವದು. ಆಗ ಯಾರಿಗೆ "ಹತ್" ಎಂದು ಬೆದರಿಸಿ ತಡೆಯಬಲ್ಲಿರಿ.

( ಅಮರ ಓಡಿ ಹೋಗುವನು. ಸಮರ ಬೆನ್ನತ್ತಿ ಓಡುವನು. ಮಹಾರಾಜ ಮತ್ತು ಮಹಾರಾಣಿಯವರು, ಮರಿಯಾಗಿಸಿಂತ ಜಾಗದಿಂದ ಹೊರಗೆ ಬರುವರು. )

**ಪುರು:**— ಪ್ರಾರ್ಥನಾ ನಮ್ಮ ಮಗಳಾದಳೂ ಅಂತ ನಾವು ತಿಳಿದಿದ್ದೆವು. ಆದರೆ ಮಗಳಾಗದೆ ಸೊಸೆಯಾಗಿ ಬಿಟ್ಟಳು.

**ಶರಿತಾ:**— ಹೌದು. ಮಹರಾಜ.

(ಒಬ್ಬ ನೌಕರ ಬಂದು ನಮಸ್ಕಾರ ಮಾಡುವನು)—

**ಪುರು:**— ಏನು, ಸಂಗತಿ?

**ನೌಕರ :-** ಇರಾಣದ ಜನರಲ್ ಸರದಾರನ ಮಗಳಾದ ರುಕ್ಸಾನಳು ತಮಗೆ ಬೆಟ್ಟಿಯಾಗಲು ಬಂದಿರುವಳು.

**ಪುರು:**— ಕಳಿಸಿಕೊಡು.

**ಶರಿತಾ:**— ನಾನು ಹೋಗುತ್ತೇನೆ. ಆಕೆ ಏನು ಹೇಳಬೇಕೆಂದಿರುವಳೋ ಅದನ್ನು ನನ್ನ ಮುಂದೆ ಹೇಳಲಿಕ್ಕಿಲ್ಲ.

(ಶರಿತಾ ರಾಣಿಯು ಹೊರಟು ಹೋಗುವಳು. ಮತ್ತು ರುಕ್ಸಾನಳು ಬಂದು ತಲೆ ತಗ್ಗಿಸುವಳು ತಲೆತಗ್ಗಿಸುವದೆಂದರೆ ಇರಾಣದ ಪದ್ಧತಿಯಲ್ಲಿ ಶರಣು ಮಾಡಿದಂತೆ )

**ಪುರು:**— ತಲೆ ತಗ್ಗಿಸಬೇಡ, ಭಾರತದಲ್ಲಿ ಸ್ತ್ರೀಯು ಪರಪುರುಷನಿಗೆ ಎಂದೂ ನಮಸ್ಕರಿಸುವದಿಲ್ಲ.

**ರುಕ್ಸಾನಾ:**— ನಮ್ಮ ದೇಶದಲ್ಲಿ, ಬಾದಶಹನೆದುರಿನಲ್ಲಿ ಪ್ರತಿಯೊಬ್ಬರೂ ಶರಣು ಮಾಡಲೇಬೇಕು. ಅಪ್ಪರಿಂದ ಪುನಃ ನಮಸ್ಕರಿಸುವೆನು ( ತಲೆತಗ್ಗಿಸವಳು )

**ಪುರು:**— ನಾನು ನಿಮ್ಮನ್ನು ಸ್ವಾಗತಿಸುತ್ತೇನೆ. ( ಕೂಡ್ರುವ ಸ್ಥಳದ ಕಡೆಗೆ ಕೈಮಾಡಿ ) ಕೂತುಕೊಳ್ಳಿರಿ. ( ರುಕ್ಸಾನಾ ಕೂತುಕೊಳ್ಳುವಳು. ) ಈಗ ಹೇಳಿರಿ ನಮ್ಮಿಂದ ನಿಮಗೇನಾಗಬೇಕಾಗಿತ್ತು.

**ರುಕ್ಸಾನಾ** ಹಿಂದುಸ್ಥಾನದ ರಾಜರಾದ ಪುರುರಾಜರಿಗಾಗಿ ನಾನೊಂದು ಕಾಣಿಕೆ ತಂದಿದ್ದೇನೆ

**ಪುರು** :— ನಿಮ್ಮ ಕಾಣಿಕೆಯನ್ನು ಆನಂದದಿಂದ ಸ್ವೀಕರಿಸುವೆನು.

**ರುಕ್ಸಾನಾ** :— ( ಮುಂದೆಹೋಗಿ ) ನಿಮ್ಮ ಕ್ಷೇಮ ಹಸ್ತವನ್ನು ( ಬಲಗೈಯನ್ನು ) ಮುಂದೆ ಮಾಡಿರಿ

**ಪುರು** :— ( ನಗುತ್ತ ) ನಿನಗೆ ಕ್ಷೇಮವಾಗಲಿ, ( ಎಂದೆನ್ನುತ್ತ ಬಲಗೈ ಮುಂದೆಮಾಡಿ ) ತಗೊ ! ( ರುಕ್ಸಾನಳು ಮುಂಗೈಮೇಲೆ ರಕ್ಷಾ ಯಿಡಲು, ಪುರು ಕೈಜಗ್ಗಿಕೊಳ್ಳುವನು )

**ರುಕ್ಸಾನಾ**:— ಯಾಕೆ! ನೀವು ಹೆದುರುವಿರಿ ?

**ಪುರು**:— ಇಲ್ಲ ಹೆದರಲಿಲ್ಲ. ವಿಚಾರಮಾಡುತ್ತಿದ್ದೇನೆ

**ರುಕ್ಸಾನಾ**:— ಇದರಲ್ಲಿ ವಿಚಾರಮಾಡುವದಾದರೂ ಏನಿದೆ?

**ಪುರು**: - ಅಂಣ ತಂಗಿಯರಾಗುವದು ಹಗುರಿದೆ,ಆದರೆ ಆಸಂಬಂಧವನ್ನು ಉಳಿಸಿಕೊಳ್ಳುವದು ಮಾತ್ರ ಕಠಿಣವಿದೆ.

**ರುಕ್ಸಾನಾ**:— ಆಲೋಚನೆ ಮಾಡಿಕೊಳ್ಳಿರಿ. ನಾನಂತೂ ಮನೆಯಿಂದ ವಿಚಾರ ಮಾಡಿಕೊಂಡೇ ಬಂದಿದ್ದೇನೆ.

( ಪುರು ವಿಚಾರ ಮಾಡತೊಡಗುವನು)

**ರುಕ್ಸಾನಾ**:— ನಾನು ಇರಾಣದಿಂದ ಬಂದಿದ್ದೇನೆ ಬರುವಾಗ ಹಿಂದುಸ್ಥಾನದ ಬಾದಶನನ್ನು ನಮ್ಮಂಣನನ್ನಾಗಿ ಮಾಡಿಕೊಳ್ಳುವೆನು. ಎಂದು ನಿರ್ಧರಿಸಿಕೊಂಡು ಬಂದಿದ್ದೇನೆ.

**ಪುರು**:— ( ವಿಚಾರ ನಂತರದ ಕೈ ಮುಂದೆ ಮಾಡಿ ) ಕಟ್ಟಿಬಿಡು.

( ರುಕ್ಸಾನಾ ರಕ್ಷಾ ಕಟ್ಟುವಳು )

**ರುಕ್ಸಾನಾ**:– (ರಕ್ಷಾ ಕಟ್ಟಿದನಂತರ)ಇಂದಿನಿಂದ ನೀವು ನನ್ನಂಣ ಆದಿರಿ

**ಪುರು**:— ನೀನು ಇಂದಿನಿಂದ ನನ್ನ ತಂಗಿಯಾದಿ. ಒಳ್ಳೇದು! ನೀನು ಮೊದಲನೇ ಸಲ ನನಗೆ ರಕ್ಷಾಕಟ್ಟಿರುವಿ. ಆದ್ದರಿಂದ ನಿನಗೇನು ಬೇಕು ಹೇಳು?

**ರುಕ್ಸಾನಾ**:– ನಾನು, ನಿಮ್ಮನ್ನು ಅಂಣನನ್ನಾಗಿ ಮಾಡಿಕೊಂಡದ್ದು ಬೆಳ್ಳಿ ಬಂಗಾರಗಳಿಗಲ್ಲ. ನನಗೆಬೇಕಾದ ಪ್ರತಿಯೊಂದು ವಸ್ತುಕೂಡನನ್ನ ದೇಶಲ್ಲಿವೆ

ಪುರು:— ತಂಗಿಯ ಹತ್ತಿರ, ಹಿಂದುಸ್ಥಾನ ಹಿಡಿಸಲಾರದಷ್ಟು ಸಂಪತ್ತಿರಬಹುದು. ಆದರೂ ಸಹ ಇಂದು ತಂಗಿಗಾಗಿ ಏನಾದರೂ ಕಾಣಿಕೆ ಕೊಡಬೇಕಾಗುತ್ತದೆ.

( ಪುರು ಎದ್ದು ಹೋಗಿ ಘಂಟೆಬಡಿಯುವನು, ನೌಕರನು ಬರುವನು. )

ಪುರು:— ಕಾರ್ಯದರ್ಶಿಗೆ ಹೇಳು, ನಂಮ ತಂಗಿಗಾಗಿ ಒಂದು ಸಾವಿರ ಮೊಹರು ಮತ್ತು ಒಂದು ಬಂಗಲೆ, ಕೊಡಲು ತಿಳಿಸು.

ರುಕ್ಸಾನಾ:— ( ನಿರುತ್ಸಾಹದಿಂದ ) ಒಂದು ಬಂಗಲೆ ಯಾಕೆ?

ಪುರು:— ಒಬ್ಬ ಮಹಾರಾಜನ ತಂಗಿ ಗುಡಿ ಗುಂಡಾರಗಳಲ್ಲಿ ಇರಬೇಕಾಗಿಲ್ಲ. ( ನೌಕರ ಹೊರಟು ಹೋಗುವನು. ರುಕ್ಸಾನಾ ವಿಚಾರದಲ್ಲಿ ಬೀಳುವಳು. )

ಪುರು:— ತಂಗಿಯವರು ಏನು ವಿಚಾರ ಮಾಡುತ್ತಿರುವರು ?

ರುಕ್ಸಾನಾ:— ನಾನಿಲ್ಲಿಗೆ ಬರಬೇಕಾದ ಕೆಲಸವೇನು ? ಎಂದು ಈಗಲೂ ನನ್ನನ್ನು ಕೇಳಲಿಲ್ಲವಲ್ಲಾ! ಎಂದು ಆಲೋಚಿಸುತ್ತಿದ್ದೇನೆ

ಪುರು:- ಹಿಂದುಸ್ಥಾನದಲ್ಲಿ ಅಂಣನ ಧರ್ಮವು "ನೀನು ಯಾಕೆ ಬಂದಿ ? ಎಂದು ತಂಗಿಯನ್ನು ಎಂದೂ ಕೇಳಬೇಡ" ಎಂದು ಹೇಳುವದು.

ರುಕ್ಸಾನಾ:— ಇರಾಣದಲ್ಲಿ ತಂಗಿಯ ಕರ್ತವ್ಯವು. "ನೀ ಬಂದ ಕೆಲಸವನ್ನು ಕೂಡಲೇ ಹೇಳಿಬಿಡು " ಎಂದು ಹೇಳುವದು.

ಪುರು:— ಹಾಗಾದರೆ ಹೇಳು! ನಾನು ಕೇಳುವೆನು.

ರುಕ್ಸಾನಾ:— ಸಿಕಂದರನನ್ನು ಪ್ರತಿ ಸಂಕಟದಿಂದ ಉಳಿಸುವೆನು, ಎಂದು ಪ್ರತಿಜ್ಞೆ ಮಾಡಿ ಬಂದಿರುವೆನು

( ಪುರು ವ್ಯಾಕುಲ ಚಿತ್ತನಾಗುವನು )

ರುಕ್ಸಾನಾ:- ನನ್ನ ಮಾತು ಕೇಳಿ ತಮಗೆ ಬಹಳ ಕೆಡಕೆನಿಸಿರಬಹುದು.?

ಪುರು:— ನನಗೆ ಕೆಡಕೇನೂ ಅನಿಸಿಲ್ಲ. ಆದರೆ ತಳಮಳವಾಗುತ್ತಿದೆ

ರುಕ್ಸಾನಾ:— ಹಾಗಾದರೆ ( ರಕ್ಷಾದಮೇಲೆ ಕೈಯಿಟ್ಟು ) ಈ ರಕ್ಷಾ ಬಿಚ್ಚಿಕೊಳ್ಳುವೆನು?

ಪುರು: ( ರುಕ್ಸಾನಳ ಕೈಮೇಲೆ ಯಡಗೈಯಿಂದ ಚಪ್ಪರಿಸುತ್ತಾ ) ಇದನ್ನು ನೀನು ಕಟ್ಟಿ ತಂಗಿಯಾಗಿರುವಿ, ಆದರೆ ಇದನ್ನು ಬಿಚ್ಚಿ

ಅನ್ಯಳಾಗಲಾರಿ. ಈಗಿನ ಈ ಸಂಬಂಧ ಎಂದೆಂದಿಗೂ ಮುರಿಯಲಾರದು.

(ಪಡದೆಯಹಿಂದೆ ಗದ್ದಲವಾಗುವದು. ಮತ್ತು ಮಹಾರಾಜಕೀ ಜೈ, ಮಹಾರಾಜಕೀ ಜೈ, ಎಂಬಶಬ್ದವಾಗುವದು.)

( ಪರದೆ ಬೀಳುವದು )

—††—

## ದೃಶ್ಯ ೧೧

ಸ್ಥಳ:— ಸಿಕಂದರನ ಛಾವಣಿ ವೇಳೆ:— ಮಧ್ಯಾನ್ಹ

(ಯಮನೀಸ ಮತ್ತು ಶಲುಕ್ಯಸರು ಮಾತಾಡುತ್ತ ಕುಳಿತಿರುವರು. ಸಿಕಂದರನು ಬರುವನು. ಯಮನೀಸ ಮತ್ತು ಶಲುಕ್ಯಸರು ಎದ್ದು ಇರಾಣದ ಪದ್ಧತಿಯಂತೆ ಮುಜುರೆ ಮಾಡುವರು.)

**ಸಿಕಂದರ:**— ಇದೇನು ಗದ್ದಲ ?

**ಶಲುಕ್ಯಸಃ**— ಬಾದಶಹರಿಗೆ ಜಯವಿದೆ ! ತಕ್ಷಶಿಲೆಯ ಮಹಾರಾಜ ಅಂಭಿರಾಜ ಸೋಲನ್ನೊಪ್ಪಿಕೊಂಡರು.

**ಸಿಕಂದರ:**— ಅವನ ಇನ್ನಿತರ ಮಿತ್ರರು ?

**ಶಲುಕ್ಯಸ:**— ಅವರು ಕೂಡಾ.....

**ಸಿಕಂದರಃ**— ಬಹಳ ಸಂತೋಷವಾಯಿತು.

**ಯಮನೀಸಃ**— ಜಗದೇಕ ವೀರರೇ ! ಅವರು ಕಪ್ಪ ಕಾಣಿಕೆ ಕಳಿಸಿದ್ದಾರೆ.

**ಸಿಕಂದರ:**— ಅವರಿಗೆ ನಮ್ಮ ಸ್ನೇಹದ ಕಾಣಿಕೆ ಕಳಿಸಿಕೊಡಿರಿ, ಮತ್ತು ಭೆಟ್ಟಿಯಾಗುವಂತೆ ತಿಳಿಸಿರಿ.

**ಯಮನೀಸ:**— ತಮ್ಮ ಆಜ್ಞೆ ಪೂರೈಸುವದು.

(ಸಿಕಂದರ ಅತ್ತಿತ್ತ ಅಡ್ಡಾಡುತ್ತ, ಯಮನೀಸನ ಎದುರು ಬಂದು ನಿಂತು.)

**ಸಿಕಂದರ:**— ಯಮನೀಸ ! ಹಿಂದುಸ್ಥಾನದಲ್ಲಿ ಮೊದಲನೇ ವಿಜಯವನ್ನು ಇಂದು ಸಂಪಾದಿಸಿದೆವು ಈ ವಿಜಯೋತ್ಸಾಹದಲ್ಲಿ ನಮ್ಮೆಲ್ಲ

ಜನರೂ ಹಿಸೇದಾರ (ಬಾಗಿದಾರ)ರಾಗಲಿ, ಅವರೆಲ್ಲರಿಗೂ ಇಂದಿನ ಕಾಣಿಕೆಯನ್ನು ಹಂಚಿಬಿಡಿರಿ. ನಮ್ಮಲ್ಲಿ ಕೆಲಸ ಮಾಡುತ್ತಿರುವ ಹಿಂದುಸ್ಥಾನ ಕೆಲಸಗಾರರಿಗೂ ಬಾಗ ದೊರೆಯಲಿ.

ಯಮುನೀಸಃ-- ತಮ್ಮ ಆಜ್ಞೆಯಂತೆ ನಡೆಯಲಾಗುವದು.

ಸಿಕಂದರಃ— ಶೆಲುಕ್ಯಸ ! ಪುರು ಮಹಾರಾಜನು, ಏನು ಉತ್ತರ ಕೊಟ್ಟನು.

ಶೆಲುಕ್ಯಸ:--ಆ ವಿಷಯವನ್ನು ತಮಗೆ ನಾಳೆ ತಿಳಿಸಬೇಕೆಂದು, ತಮ್ಮ ದಾಸನ ಇಚ್ಛೆ ಇದೆ.

ಸಿಕಂದರ:- ಇಂದೇಕಿಲ್ಲ ?

ಶೆಲುಕ್ಯಸ:— ಇಂದು ವಿಜಯದ ದಿನವಿದೆ.

ಸಿಕಂದರಃ-- ಸಿಕಂದರನಿಗೆ ಪ್ರತಿದಿನವೂ ವಿಜಯದ ದಿನವಿದೆ. ಅವನು ಏನು ಹೇಳಿದನೆಂಬ ವಿಷಯ ನನಗಿಂದೇ, ತಿಳಿಯಬೇಕಾಗಿದೆ.

ಶೆಲುಕ್ಯಸಃ--- ನನ್ನ ಮನಸ್ಸು ಹಿಂಜರಿಯುತ್ತಿದೆ.

ಸಿಕಂದರಃ ಶುಭ ಸುದ್ದಿ ತಿಳಿಯಲು ತಡವಾದಷ್ಟೂ ಒಳ್ಳೆಯದಾಗುವದು. ಆದರೆ ಅಶುಭ ಸುದ್ದಿ ತಿಳಿಯಲು ತಡವಾದಷ್ಟೂ ಕೇಡು ಕುಂಟಾಗುವದು. ತಿಳಿಯಿತೆ.... ಕೂಡಲೇ ಹೇಳು ಏನು ಹೇಳಿದನು ?

ಶೆಲುಕ್ಯಸಃ-- ಪುರುರಾಜನು, ಕಲವಾರದೊಡನೆ ಯುದ್ಧ ಮೈದಾನದಲ್ಲಿ ಉತ್ತರ ಕೊಡುವೆನು ಎಂದು ಹೇಳಿದ್ದಾನೆ

ಸಿಕಂದರಃ— (ಒಮ್ಮೆಲೇ ಯಮುನೀಸನ ಕಡೆಗೆ ಹೊರಳಿ) ಯಮುನೀಸ ! ಇರಾಣದ ಅತಿ ಅತ್ಯುತ್ತಮ ವಸ್ತುವನ್ನು, ಅವನಿಗೆ ಕೊಡುವ ಕಾಣಿಕೆಗಾಗಿ ತೆಗೆದಿಡು ನಮ್ಮಂಥವರು, ತಮ್ಮ ಒಡೆತನವನ್ನು ಯಾರು ಒಪ್ಪಿಕೊಳ್ಳುವರೋ ಅವರನ್ನೇ ಅವರು ಅಪ್ಪಿಕೊಳ್ಳುವರು. ಆದರೆ; ನಾನು, ಯಾರು ನನ್ನೊಡನೆ ಯುದ್ಧ ಮಾಡುವರೋ, ಅವರನ್ನು ಮನಃಪೂರ್ವಕ ಮರ್ಯಾದಿಸುವೆನು.

(ಸಿಕಂದರನು ಒಂದು ಕಡೆ. ಯಮುನೀಸ ಮತ್ತು ಶೆಲುಕ್ಯಸರು ಮತ್ತೊಂದು ಕಡೆ ಹೊರಟು ಹೋಗುವರು )

# ದೃಶ್ಯ ೧೨

**ಸ್ಥಳ** ಃ— ಪುರುರಾಜನ ಯುದ್ಧ ಮಂಡಳ **ವೇಳೆ** :— ಸಾಯಂಕಾಲ

( ಪುರು, ಮತ್ತು ಹಿಂದುಸ್ಥಾನದ ಇತರ ರಾಜರು ಕೂತಿರುವರು ಪುರುರಾಜನು ಹೇಳುತ್ತಿರುವನು,ಉಳಿದ ರಾಜರು ಕೇಳುತ್ತಿರುವರು ಆಗ ರಾಜ ಕುಮಾರರಾದ ಅಮರ ಮತ್ತು ಸಮರರು ಸಹ ಹಾಜರಿರುವರು )

**ಪುರು** ಃ— ನಾನಿಂದು ನಿಮಗೆ ಸಂದೇಶ ಕೊಡುತ್ತಿಲ್ಲ ನಿಮ್ಮ ಕರ್ತವ್ಯದ ಕಡೆಗೆ ನೀವು ಲಕ್ಷ್ಯಕೊಡಿರೆಂದು ಹೆಳುವೆನು.

ಯುದ್ಧ ಮಾಡಲು ಗೊತ್ತಿದ್ದವನು ವೀರನೆನಿಸುವನು ಸಾವು ಗೊತ್ತಿದ್ದವನು ಮಹಾನುಭಾವನೆನಿಸುವನು. ಮಾನವ ಜೀವನದ ಹೊಣೆ ಇವುಗಳನ್ನೇ ಅವಲಂಭಿಸಿದೆ. ಇಂಥ ಘಟನೆಗಳು ಸದಾ ಸಂಭವಿಸಲಾರವು ಯೊಧನಿಗೆ ಯುದ್ಧ ಮಾಡುವದು ಗೊತ್ತಿರುವದು ಸಾವು ಸನ್ಯಾಸಿಗೆ ಗೊತ್ತಿರುವದು ಇವೆರಡೂ ಗೊತ್ತಿರುವ ವೆಕ್ತಿಯೆಂದರೆ ರಾಜ, ರಾಜ ನೆನಿಸಿಕೊಳ್ಳಬೇಕಾದರೆ ಇವೆರಡನ್ನೂ ತನ್ನಲ್ಲಿ ಉಳಿಸಿಕೊಳ್ಳಬೇಕು ಹಿಂದುಸ್ಥಾನದ ರಾಜರು: ತಮ್ಮ ಹೊಣೆಯನ್ನು ಪಣಕ್ಕೆ ಹಚ್ಚುವಕಾಲ ಈಗ ಪ್ರಾಪ್ತವಾಗಿದೆ. ಅಂತೆಯೇ ಇರಾಣದ ರಾಜನಾದ ಸಿಕಂದರನು ನಾವು ಹೇಡಿಗಳೂ, ಅಂಜುಬುರಕರೂ ಎಂದು ತಿಳಿದು ನಮ್ಮಮೇಲೆ ದಾಳಿಮಾಡಿದ್ದಾನೆ.

**ಅಭಿಸಾರ**ಃ— ಅವನು ಹಿಂದುಸ್ಥಾನದಮೇಲೆ ದಾಳಿ ಮಾಡಲು ಕಾರಣವಾದರೂ ಏನು ?

**ಪುರು**:— ಅವನು ಇಡೀ ಜಗತ್ತೇ ತನ್ನ ಒಡೆತನದಲ್ಲುಳಿಯಬೇಕೆಂದು ಅನ್ನುವನು.

**ಕಲುತರಾಜ**:— ಯಾವದೊಂದು ದೇಶವು ಅವನ ಒಡೆತನದಲ್ಲುಳಿಯಲು ಒಪ್ಪಿಕೊಳ್ಳದಿದ್ದರೆ ?

**ಪುರು**ಃ— ಆದೇಶವು ಬದುಕಿ ಬಾಳಲು ಶಕ್ಯವಿಲ್ಲ. ಎಂದೆನ್ನುವನು. ಅವನು ಒಂದು ಕೈಯಲ್ಲಿ ಕಠಾರಿಯನ್ನೂ ಇನ್ನೊಂದು

ಕೈಯಲಿ ಬೆಂಕಿಯನ್ನೂ ಹಿಡಿದುಕೊಂಡು ದಂಡ ಯಾತ್ರೆಗೆ ಹೊರಟಿದ್ದಾನೆ ಎದುರುಬಂದ ದೇಶಗಳನ್ನು ಕತ್ತರಿಸುವನು. ಸೋಲನೊಪ್ಪಿಕೊಂಡ ದೇಶಗಳಿಗೆ ಭ್ರಷ್ಟ ಮತ್ತು ನಷ್ಟವೆಂಬ ಬೆಂಕಿ ಹಚ್ಚುವನು. ಈಗ ಭಾರತ ದೇಶದ ಸರತಿಬಂದಿದೆ. ಈಗ ಸಿಕಂದರನು ಬಾಗಿಲಲ್ಲಿ ನಿಂತು ಪುನಃ ಪುನಃ ಕೇಳುತ್ತಿರುವನು ಹೇಳಿರಿ ಮಹಾರಾಜ ಅಬಿಸಾರ ನಿಮ್ಮ ವಿಚಾರವೇನು ?–

**ಅಬಿಸಾರಃ** ಶೌರ್ಯ ಧೈರ್ಯಗಳು ಅವನೊಬ್ಬನಿಗಾಗಿಲ್ಲ. ನ್ಯಾಯ ಮತ್ತು ನಿಷ್ಠುರತೆಗಳ ರಕ್ಷಕರಿಗೆಲ್ಲರಿಗೂ ಅವೆ. ಜಗತ್ತನ್ನೆ ಹೆದರಿಸಿ ಬೆದರಿಸುವದಕ್ಕೆ ಅವನಿಗಾವ ಅಧಿಕಾರವಿದೆ.

**ಪುರುಃ** ಕಲುತರಾಜ ! ನೀವೇನು ಆರಿಸಿಕೊಳ್ಳುವಿರಿ ? ಹೇಡಿ ಜೀವನವನ್ನೋ ಅಥವಾ ಶೂರ ಜೀವನವನ್ನೋ ?

**ಕಲುತರಾಜ:**— ನಮಗೆ ಶೂರ ಜೀವನಬೇಕು.

**ಪುರು:** ಶಲಕೋಟಿ ರಾಜ ! ನಿಂಮ ವಿಚಾರವೇನು ?

**ಶಲಕೋಟಿರಾಜ :**— ನಮಗೆ ಯುದ್ಧಬೇಕು.

**ಪುರುಃ**— ಪಂಚವಟಿ ನೀವೇನನ್ನುವಿರಿ

**ಪಂಚವಟಿ:** — ನಮಗೆ ಗೆಲವುಬೇಕು.

**ಪುರುಃ**— ನಿಮ್ಮೆಲ್ಲರ ಏಕ ಅಭಿಪ್ರಾಯದಿಂದ ನನಗೆ ಸಂತೋಷವಾಗುತ್ತದೆ. ಆದರೆ; ನಾವು ಮಾಡಬೇಕಾದ ಯುದ್ಧವು ಸಿಕಂದರನೊಡನೆ, ಇದು ನಿಮ್ಮ ಲಕ್ಷ್ಯದಲ್ಲಿರಲಿ. ಸಿಕಂದರನು ಸೋಲನ್ನು ಸ್ವಪ್ನದಲ್ಲಿಯೂ ಕಂಡಿಲ್ಲ. ಕೇವಲ ವಿಜಯವನ್ನೇ ಕಲಿತಿದ್ದಾನೆ.

**ಸಮುಲೆಃ**— ಇರಬಹುದು, ಆದರೆ ದೇವರ ಕೃಪಾದೃಷ್ಟಿಯೊಂದಿದ್ದರೆ. ಅವನಿಗೆ ಸೋಲುವದನ್ನೂ ಕಲಿಸಿ ಕೊಡೋಣ.

**ಅಮರಃ** — ಅವನು ಇನ್ನೊಮ್ಮೆ ಹಿಂದುಸ್ಥಾನದಕಡೆ ಕಣ್ಣೆತ್ತಿಸಹ ನೋಡದಂತೆ ತಕ್ಕಪ್ರಾಯಶ್ಚಿತ್ತ ಮಾಡಲೇಬೇಕು.

**ಅಬಿಸಾರ ಮತ್ತು ಇತರರಾಜರು :**— ( ಮೇಲುಧ್ವನಿಯಲ್ಲಿ ಏಕಕಂಠದಿಂದ ) ಭಾರತ ಮಾತಾಕೀ ಜಯ್ !

**ಪುರು**:— (ಪ್ರತಿಶಬ್ದದ ಮೇಲು ಜೋರುಕೊಟ್ಟು) ಭಾರತ ಮಾತಾಕೀ ಜೈಯ್

**ಕಲುತರಾಜ**:— ಪುರರಾಜ ! ನಿಮ್ಮ ವಿಚಾರವನ್ನೇ ನೀವು ತಿಳಿಸಲಿಲ್ಲವಲ್ಲಾ ?

**ಪುರು**:— ಜಗತ್ತಿನ ಸುಖ ಶಾಂತಿಗಳಿಗೆ ಅಡ್ಡಿ ಅತಂಕಗಳನ್ನು ತಂದೊಡ್ಡುವರೂ, ಸಂಸಾರದ ಸಂಣ ದೊಡ್ಡ ಶಕ್ತಿಗಳನ್ನು ತಮ್ಮ ಅಂಕಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುವರೂ, ಅವರು ಯಾರೇ ಇರಲಿ, ಅವರನ್ನು ಎದುರಿಸುವದು ಪ್ರತಿಮಾನವನ ಮಹಾಧರ್ಮವು. ಹಾಗೆ ಮಾಡದವನು ತಾನು ಮಾನವನಲ್ಲವೆಂದು ಒಪ್ಪಿಕೊಳ್ಳಬೇಕು – ಕಾರಣ ನಾನೂ ಒಬ್ಬ ಮಾನವನಿರುವೆನು

**ಕಲುತರಾಜ**:— ನಮ್ಮ ಮನಸ್ಸಿನಲ್ಲಿಯ ಮಾತನ್ನೇ ನೀವು ನುಡಿದಿರಿ

**ಪುರು**:— ಪ್ರಜರ ಸಲುವಾಗಿ ರಾಜನಿರುವನೆಂದು, ನಾವು ತಿಳಿಯುವೆವು ಆದರೆ; ಸಿಕಂದರನು ರಾಜರ ಸಲುವಾಗಿ ಪ್ರಜರಿರುವರೆಂದು ತಿಳಿದಿರುವನು. ಇಂಥ ಸಿಕಂದರನ ವಿರುದ್ಧ ಯುದ್ಧ ಮಾಡದಿದ್ದರೆ, ನ್ಯಾಯವು ನಮ್ಮನ್ನು ಪಾಪಿಗಳೆಂದು ಕರೆಯುವದು

**ಕಲುತರಾಜ**:— ನಿಮ್ಮ ವಿಚಾರವು ಬಹಳ ಉತ್ತಮವಿರುವದು.

**ಅಭಿಸಾರ**:— ನಿಮ್ಮ ಸಹಾಯಕ್ಕಾಗಿ ನಾವು ಸದಾಸಿದ್ಧರಿರುವೆವು

**ಪುರು**: ಆದರೀಗ ನಂಮ ನಮ್ಮಲ್ಲಿಯ ವಿರೋಧವನ್ನು ಬಿಟ್ಟುಬಿಡಬೇಕು. ಮನೆಯ ಜಗಳವನ್ನು ಮರೆತುಬಿಡಬೇಕು ಒಬ್ಬರು ಮಾಡುವ ಇನ್ನೊಬ್ಬರ ನಿಂದೆಯನ್ನು ನಿಲ್ಲಿಸಬೇಕು ಎಲ್ಲರೂ ಒಂದುಗೂಡಬೇಕು ಜಗತ್ತಿನ ಕಲ್ಯಾಣಕ್ಕಾಗಿ, ಮನೆಯ ಸುಖ ಶಾಂತಿಗಳನ್ನು ಉಳಿಸಿಕೊಳ್ಳುವದಕ್ಕಾಗಿ, ನಾವೆಲ್ಲರೂ ಒಕ್ಕಟ್ಟಿನಿಂದ ಎದುರಿಸಿದರೆ, ವಿಜಯವು ಎದ್ದು ಬರುವದು. ಒಡಕುಂಟಾದರೆ, ಅವಹೇಳನದ ಮರಣ ಪ್ರಾಪ್ತವಾಗುವದು ನಿಶ್ಚಯ.

(ಪುರುರಾಜನು ಎದ್ದು ನಿಲ್ಲುವನು. ಆಗ ಉಳಿದ ರಾಜರೂ ಎದ್ದು ನಿಲ್ಲುವರು. )

ಎಲ್ಲರೂ :— ( ಏಕ ಕಂಠದಿಂದ ) ಭಾರತಮಾತಕೀಜೈ, ಭಾರತಮಾತಾಕೀಜೈ, ( ಪಡದೇ ಬೀಳುವದು ಪಡದೆಯ ಹಿಂದಿನಿಂದ ಹಾಡುತ್ತಿರುವ ಹಾಡಿನ ಧ್ವನಿ ಕೇಳಿಬರುವದು. ಪಡದೆ ಏಳುವದು. )

— ಹಾಡು —

( ಏರುಧ್ವನಿಯಲ್ಲಿ )

ಏಳಿ ಎದ್ದೇಳಿ ವೀರರೇ । ಕೆಚ್ಚೆದೆಯಶೂರರೇ ।
ನಾಡ ದೇವಿಯ ಕರೆಗೇ । ಓಗೊಡಲು ಬನ್ನಿರೀ ॥

ನಮ್ಮ ರಾಜ್ಯ ಗೆದೆಯಲಿ । ನಮ್ಮ ದೇಶ ಗೆದೆಯಲಿ ।
ನಮ್ಮ ನಿಮ್ಮ ಬೇಧವಳಿದು । ಒಂದುಗೂಡ ಬನ್ನಿರಿ ।
ವೈರಿ ಓಡಿಸ ಬನ್ನಿರಿ । ನಮ್ಮ ದೇಶ ಗೆದೆಯಲಿ ॥

ನಮ್ಮ ರಾಜ್ಯ ಕಿರಿಯದು । ನಮ್ಮ ದೇಶ ಹಿರಿಯದು ।
ದೇಶ ಪ್ರೇಮ ಮೂಡಿ ಬರಲಿ । ಹಿಂದು ಮಾತೆ ಮಕ್ಕಳಲ್ಲಿ ।
ಶಿರಿಯ ದೇಶ ನಮ್ಮದು । ನಮ್ಮ ದೇಶ ಗೆದೆಯಲಿ ॥೨॥

## ದೃಶ್ಯ ೧೩

**ಸ್ಥಾನ:— ಸಿಕಂದರನ ಡೇರೆ**

ಸಿಕಂದರ, ಶೆಲುಕ್ಯಸ, ಯಮುನೀಸ, ಏರಟೆಗಣೇಶ, ಮತ್ತು ಅಂಭಿರಾಜ, ಇವರೆಲ್ಲರೂ ಕೂಡಿದ್ದಾರೆ ಸಿಕಂದರನು ವಿಚಾರ ಮಗ್ನನಾಗಿ ಅತ್ತಿಂದಿತ್ತ ಇತ್ತಿಂದತ್ತ ಅಡ್ಡಾಡುತ್ತಿದ್ದಾನೆ. ಉಳಿದವರಲ್ಲಿ ಇಬ್ಬಿಬ್ಬರು ಸಿಕಂದರನ ಎಡಬಲಗಳಲ್ಲಿ ಎದುರು ಬದರಾಗಿ ನಿಂತಿದ್ದಾರೆ. ಮಧ್ಯದಲ್ಲಿ ಸಿಕಂದರನು ಅತ್ತಿಂದಿತ್ತ ಇತ್ತಿಂದತ್ತ ಗಾಂಭೀರ್ಯದ ರೀತಿನಲ್ಲಿ ತಿರು

ಸಿಕಂದರ:— ಎರಡು ತಿಂಗಳು ಕಳೆದು ಹೋದರೂ ಸೈನ್ಯದ ಒಬ್ಬ ಸಿಪಾಯಿ ಕೂಡಾ ನದಿಯನ್ನು ದಾಟುವದಾಗಲಿಲ್ಲ. ಶೆಲುಕ್ಯಸ! ನನ್ನ ಬುದ್ಧಿ ಭ್ರಮಗೊಳ್ಳುತ್ತಿದೆ.

ಶೆಲುಕ್ಯಸಃ— ಥೊರೆಗಳಲ್ಲಿ ಕಳವಳವೇಕೆ ? ಬಿದಗಿಯ ಚಂದ್ರನಂತೆ ಬೆಳಗುತ್ತಿರುವ ತಮ್ಮ ಶೌರ್ಯ ಸಾಹಸಗಳು ಇನ್ನೂ ಹೆಚ್ಚೆಚ್ಚು ಪ್ರಕಾಸಿಸುವದಕ್ಕಾಗಿ ಇಂದಿನ ವರೆಗೆ ತಡವಾಗಿದೆ. ಆದರೂ....

ಸಿಕಂದರಃ— ( ನಡುವೆ ಬಾಯಿಹಾಕಿ ) ಇದಕ್ಕೆ ನೀನು ತಡ ಎನ್ನುವಿಯಾ! ನಂಮ ದೇಶದ ಶಕ್ತಿಯು ಇದಕ್ಕೆ ತನ್ನ ಸೋಲು, ಎಂದು ತಿಳಿಯುವದು. ನಮಗೆ, ಇಲ್ಲಿಯವರೆಗೆ ಯಾವ ನದಿಯೂ ಇಷ್ಟು ದಿನಗಳವರೆಗೆ ಅಡ್ಡಾಗಿ ನಿಂತಿರಲಿಲ್ಲ ( ತಟ್ಟನೆ ಯಮುನೀಸನತ್ತ ಹೊರಳಿ ) ಇದಕ್ಕೆ ನೀನೇನನ್ನುವಿ ಯಮುನೀಸ ?

ಯಮುನೀಸಃ— ಇದು ಮಳೆಗಾಲ ಪ್ರಭು!

ಸಿಕಂದರಃ— ನಿಮ್ಮ ದುರ್ಬಲತೆಯನ್ನು ಮಳೆಗಾಲದ ಮರೆಯಲ್ಲಿ ಮುಚ್ಚಲು ಪ್ರಯತ್ನಿಸಬೇಡಿರಿ. ಇಲ್ಲೀಗ ಮಳೆಯಿಲ್ಲ ಎನ್ನುವದು ಗೊತ್ತಿದೆಯೆ ? ನಮ್ಮನ್ನು ತಡೆದು ನಿಲ್ಲಿಸಿದ್ದು ನದಿಯಲ್ಲ; ಪುರುರಾಜನ ಸೈನ್ಯ. ಅದು ನಮ್ಮನ್ನು ಮುನ್ನಡೆಯಲು ಕೊಡುತ್ತಿಲ್ಲ.

ಅಂಭಿರಾಜಃ— ರಾಜಾಧಿರಾಜ ! ನಾನು ಎಲ್ಲಿಯವರೆಗೆ ಜೀವಂತಿರುವೆನೋ ಅಲ್ಲಿಯ ವರೆಗೆ ತಾವು ಚಿಂತಿ ಮಾಡುವ ಕಾರಣವಿಲ್ಲ. ತಮ್ಮ ಸೈನ್ಯ ಮುನ್ನಡೆದೇ ತೀರುವದು.

ಸಿಕಂದರಃ— ದೇಶ ಭಕ್ತಿಯು, ನಿಮ್ಮ ಸಾಹಸಕ್ಕೆ ಸಂತೋಷಗೊಂಡಿದೆ. ನಾನು ಯಾರಿಂದ ಸಂತೋಷನಾಗುವೆನೋ, ನಾನು ಯಾವ ವಸ್ತುವನ್ನು ಬಹಳ ಸುಂದರವೆಂದು ಕೈಮಾಡಿ ತೋರಿಸುವೆನೋ ಅದಕ್ಕೆ ಮತ್ತು ಅವನಿಗೆ ಇರಾಣಿ ಹೆಸರಿನಿಂದ ಕರೆಯುವೆನು, (ಗ್ಲಾಸಿಗೆ ಹೂಜೆಯಿಂದ ಮಧ್ಯವನ್ನು ಸುರುವುತ್ತ ) ಆದ್ದರಿಂದ ಇಲ್ಲಿಯವರೆಗೆ ನೀನು ಮಹಾರಾಜ ಅಂಭಿಯಾಗಿದ್ದಿರಿ ಇಂದಿನಿಂದ ಮಹಾರಾಜ ಅಂಭಿಸ ಆಗುವಿರಿ. ( ಮಧ್ಯ ಕುಡಿಯುತ್ತ ) ಯಮುನೀಸ !

ಬರೆದುಕೋ, ಇಂದಿನಿಂದ ಮಹಾರಾಜರ ಹೆಸರು ಬದಲುಮಾಡಿದೆ.
( ಯಮುನೀಸನು ಒಪ್ಪಿ ತಲೆತಗ್ಗಿಸುವನು. )

**ಅಂಭಿರಾಜ :—** ಬಾದಶಹರು ದಯಪಾಲಿಸಿದ ಹೆಸರಿಗೆ ಮರ್ಯಾದಿಸುವೆನು ( ಸಿಕಂದರನು ಶೆರೆಯನ್ನು ಕುಡಿದು ·ತಟ್ಟನೆ ಅಂಭಿರಾಜ ನೆದುರು ಬಂದು ನಿಂತು )

**ಸಿಕಂದರ :—** ಅಂಭಿರಾಜ ! ಪುರುರಾಜನು ನಿಜವಾಗಿಯೂ ಬಹಳ ಶೂರನಿರುವನೇನು ? ಯುದ್ಧದ ಪೂರ್ವದಲ್ಲಿ ಅವನನೊಮ್ಮೆ ಅವನ ಶಕ್ತಿ, ಸಾಹಸ, ಮತ್ತು ಧೀರತೆಗಳೊಡನೆ ನೋಡಬೇಕಾಗಿದೆ. ಯಾಕಂದರೆ ಯುದ್ಧದನಂತರ ಅವನು ಬದುಕುಳಿದರೆ ಅವನ ಶಕ್ತಿ,ಸಾಹಸ ಧಿರತೆ ಮತ್ತು ವೀರತೆಗಳು ಉಳಿಯಲಾರವು. ಒಂದುವೇಳೆ ಅವನಶಕ್ತಿ, ಸಾಹಸ, ಮತ್ತು ಧಿರತೆ, ವೀರತೆಗಳು ಉಳಿದರೆ, ಸ್ವತಃ ಅವನು ಉಳಿಯಲಾರನು. ಅದ್ದರಿಂದ ನಾನು ಯುದ್ಧದ ಮೊದಲು ಅವನನ್ನು ನೋಡಬೇಕೆಂದಿದ್ದೇನೆ.

**ಅಂಭಿರಾಜ:—** ಆದರೆ ಚಕ್ರವರ್ತಿಗಳೇ —

**ಸಿಕಂದರಃ—** ( ನಸುನಕ್ಕು ) ಆದರೆ ಗೀವರೆ ಏನೂ ಇಲ್ಲ. ನಿಮ್ಮ ಚಕ್ರವರ್ತಿಯ ಅಪಾರ ಶಕ್ತಿಯನುಂದೆ, ತನ್ನ ಅಲ್ಪಶಕ್ತಿಯನ್ನೆ ನಂಬಿರಬೇಕಾದರೆ ಅವನನ್ನು ಅವನ ತಂದೆತಾಯಿಗಳು ಯಾವ ಕಲ್ಲು ಅಥವಾ ಕಬ್ಬಿಣದಿಂದ ಮಾಡಿದ್ದಾರೆ ನೋಡಬೇಕಾಗಿದೆ. ಈ ಯುದ್ಧದಿಂದ ತನ್ನ ಜೀವನದಲ್ಲಿ ಭಯಂಕರ ಬಿರುಗಾಳಿ ಬೀಸದಿರದೆಂದು ಗೊತ್ತಿದ್ದರೂ, ಸೋಲನೊಪ್ಪದ ಆ ಕಲ್ಲಿನಂತಹ ಕಠೋರವ್ಯಕ್ತಿಗಳು ಪುನಃ ಪುನಃ ಹುಟ್ಟಲಾರರು. ಸಹಸ್ರಾರು ಸಹಸ್ರವರ್ಷಗಳಿಗೊಮ್ಮೆ ಜನ್ಮಿಸುವರು. ( ಯಮುನೀಸನ ಹತ್ತಿರ ಹೋಗಿ ) ಯಮುನೀಸ ! ತಯಾರಮಾಡು ನದಿಯನ್ನು ದಾಟಿ ಹೋಗುವ ನಿರ್ಧಾರ ಮಾಡಿದ್ದಾನೆ.

( ಸಿಕಂದರನು ಹೊರಟು ಹೋಗುವನು, ಅವನ ಹಿಂದಿಂದ ಯಮುನೀಸನೂ ಹೋಗುವನು. )

ಪಿರಟಿ ಗಣೇಶ:— ನಮ್ಮ ಬಾದಶಹನು ನಿಜವಾಗಿಯೂ ಬಹಾದ್ದೂ ರಸಿದ್ದಾನೆ ಯಾಕಂದರೆ ತನಗೆ ಏನುಬೇಕೋ ಅದನ್ನು ಮಾಡಿಯೇ ತೀರುವನು. ಅವನನ್ನಾರೂ ತಡೆಯಲಾರರು.

ಶಲುಕ್ಯಸ:— ಅಲೆಕ್ಝಾಂಡರ ಜಿಂದಾಬಾದ !

## ದೃಶ ೧೪

ಸ್ಥಾನ:— ಪುರಮಹಾರಾಜನ ದರ್ಬಾರ ಸಮಯ:— ಮಧ್ಯಾಹ್ನ

( ಪುರ ಮಹಾರಾಜರು ಸಿಂಹಾಸನದಮೇಲೆ ಕುಳಿತಿದ್ದಾರೆ. ಸಿಂಹಾಸನದ ಎಡಬಲಗಳಲ್ಲಿರುವ ಚಿಕ್ಕ ಸಿಂಹಾಸನಗಳೆರಡರ ಮೇಲೆ ಅಮರ ಮತ್ತು ಸಮರರು ಕೂತಿದ್ದಾರೆ. ದರ್ಬಾರದ ಉಳಿದ ಸದಸ್ಯರು ತಮ್ಮ ತಮ್ಮ ಸ್ಥಳಗಳಲ್ಲಿ ಕೂತಿದ್ದಾರೆ. ಎದುರಿನ ಮಹಡಿ ( ಅಂತಸ್ತಿ )ನಲ್ಲಿ ಶರೀತಾರಾಣಿ, ಪ್ರಾರ್ಥನಾ ಮತ್ತು ರುಕ್ಸಾನಾ ಕೂತಿದ್ದಾರೆ. ಅಲ್ಲಿಂದ ಇಡೀ ದರ್ಬಾರವನ್ನು ನೋಡುವದಕ್ಕೂ, ದರ್ಬಾರದ ಸಂಗತಿಗಳನ್ನು ಕೇಳುವದಕ್ಕೂ ಬರುತ್ತಿದೆ. ಆದರೂ ಅವರುಮಾತ್ರ ಯಾರಿಗೂ ಕಾಣುವದಿಲ್ಲ. )

(ಭಟ್ಟಂಗಿಯು ಕವಿತಾ ಅನ್ನತೊಡಗುವನು.)

ಭಟ್ಟಂಗಿ:— (ಹೊಗಳಿಕೆ)

ಪುರುರಾಜ! ಪುರುಷ ಪುತ್ರ ನೀನು,
ನಿನಗಿದೆ ಜೇನು,
ಜೇನಿಗುಂಟೆ ನೊಣ ಅಪಾರ,
ನೊಣಕಂಜಿ ಬಿಟ್ಟಿಲ್ಲ ನೀನು,
ನ್ಯಾಯಕಂಜಿ ಬಿಟ್ಟೆ ನಿನಗೆ—
ಜಯವಿದೆ, ನಿನ್ನ ಕಾರ್ಯಕೆ ಜಯವಿದೆ ॥ ೧ ॥

ಮಹಾರಾಜ! ನಾಡಪರಶು ನೀನು,
ಕಾಲರುದ್ರ ನೀನು,
ಆಕ್ರಮಣ ಶಕ್ತಿಯುಂಟು ನಿನಗಪಾರ,
ವೈರಿಗಂಜಿ ಬಿಟ್ಟಿಲ್ಲ ನೀನು,

ನೀತಿಗಂಜಿ ಬಿಟ್ಟ ನಿನಗೆ
ಜಯವಿದೆ ನಿನ್ನ ಬುದ್ಧಿಗೆ ಜಯವಿದೆ ॥ ೨ ॥

( ಕವಿತಾ ಮುಗಿದ ಕೂಡಲೆ ದರ್ಬಾರದವರೆಲ್ಲರೂ, ಏಕ ಕಂಠ ದಿಂದ )

**ದರ್ಬಾರದವರು**:— ಪುರುರಾಜಕೀ ಜೈ!, ಪುರುರಾಜಕೀ ಜೈ!!(ಎಂದು ನುಡಿಯುವರು )

**ಕಾವಲಗಾರ**:— ಯುನಾನದ ಮಹಾರಾಜ ಸಿಕಂದರನ ರಾಜದೂತನು, ಮಹಾರಾಜರ ಸನ್ನಿಧಿಗೆ ಸಿಕಂದರನ ಸಂದೇಶವನ್ನು ತಂದಿದ್ದಾನೆ ಮತ್ತು ಅವನು ಒಳಗೆ ಬರಲು ಅಪ್ಪಣೆ ಕೇಳುತ್ತಿದ್ದಾನೆ.

**ಪುರು**:— ಬರಮಾಡು

( ನೌಕರನು ರಾಜದೂತನನ್ನು ಕರೆತರಲು ಹೊರಗೆ ಹೋಗುವನು. ಸಿಕಂದರನು ಸ್ವತಃ ರಾಜದೂತನ ವೇಷದಲ್ಲಿ ಒಳಗೆ ಬರುವನು. ಇರಾಣದ ಪದ್ಧತಿಯಂತೆ ಕೈ ಮುಂದೆ ಮಾಡಿ ಮುಜುರೆ ಮಾಡುವನು. ಮತ್ತು ತಾನು ತಂದಿದ್ದ ಪತ್ರವನ್ನು ಪುರುರಾಜರ ಸನ್ನಿಧಿಗೆ ಅರ್ಪಿಸುವನು. )

**ಪುರು**:— ( ಮಂತ್ರಿ ಕೈಗೆ ಪತ್ರವನ್ನು ಕೊಡುತ್ತ) ಮಂತ್ರಿಗಳೇ! ತಮಗೆ ಇರಾಣದಬಾಷೆ ಗೊತ್ತಿರಬಹುದೆಂದು ನನಗನಿಸುತ್ತದೆ, ತಮಗೆ ಬರುತ್ತಿದ್ದರೆ ಓದಿರಿ. ಏನು ಬರೆದಿದೆ ನೋಡೋಣ ?

( ಮಂತ್ರಿಯು ಅದನ್ನು ಸರಸರನೆ ಉಚ್ಚಿ ನೋಡತೊಡಗುವನು, ದರ್ಬಾರದ ಉಳಿದ ಜನರು ಪತ್ರದ ವಿಷಯ ತಿಳಿಯಲು ಉತ್ಸುಕರಾಗಿ ಮಂತ್ರಿಯನ್ನೇ ನೋಡುತ್ತಲಿದ್ದರು. ಪುರುರಾಜರು ಸಿಂಹಾಸನದಮೇಲೆ ಆರಾಮವಾಗಿ ಕೂತಿದ್ದರು. ಅವರ ಮುಖ ಮಂಡಲದಲ್ಲಿ ಯಾವ ಬದಲಾವಣೆ ಕಾಣುತ್ತಿರಲಿಲ್ಲ. ಸಿಕಂದರನು ಸುಮ್ಮನೆ ಸಿಂಹಾಸನದೆದುರು ನಿಂತಿದ್ದನು. )

**ಮಂತ್ರಿ**:— ಪತ್ರದ ಸಮಾಚಾರ ಈ ಪ್ರಕಾರವಿರುವದು. "ಚಕ್ರವರ್ತಿ ಅಲೆಕ್ಝಾಂಡರನ ವತಿಯಿಂದ ಮಹಾರಾಜಾ ಪುರು ಇವರಿಗೆ ಕ್ಷೇಮ ಸಮಾಚಾರದ ವಿನಂತಿಗಳು.

"ಯುನಾನದ ಚಕ್ರವರ್ತಿಯ ಮಗನಾದಅಲೆಕ್ಝೆಂಡನು ಜಗತ್ತನ್ನೇ ಗೆದೆಯುವ ಪ್ರತಿಜ್ಞೆಮಾಡಿ ದಂಡಯಾತ್ರೆಗೆ ಹೊರಟಿರುವನೆಂಬ ಸಂಗತಿಯು ಮಹಾರಾಜರಿಗೆ ತಿಳಿದಿರಲುಸಾಕು. ಆದರೆ ಅನೇಕ ನಿರಪರಾಧಿ ಜನರ ರಕ್ತವನ್ನು ನೀರಿನಂತೆ ಹರಿಸುವದು ಅವರಿಗೆ ಬೇಕಾಗಿಲ್ಲ. ಆದ್ದರಿಂದ ಅಂಭಿರಾಜ ಮತ್ತು ಅವನ ಮಿತ್ರರಾಜರು, ಯಾವಪ್ರಕಾರ ತಲೆಬಾಗಿ ತಮ್ಮ ಸೋಲನ್ನೊಪ್ಪಿಕೊಂಡು, ಬುದ್ಧಿವಂತಿಕೆಯಿಂದ ತಮ್ಮ ಅಧಿಕಾರ ಉಳಿಸಿಕೊಂಡರೋ ಅದರಂತೆ, ನೀವುಕೂಡಾಅಲೆಕ್ಝೆಂಡರನ ವಿಜಯವನ್ನು ಮಾನ್ಯ ಮಾಡಿ ದರೆ ಈಗಿರುವ ನಿಮ್ಮ ರಾಜಪದವಿ, ರಾಜ್ಯ, ಅಧಿಕಾರಗಳು ಹಾಗೆ ಉಳಿಯುವವು. ಆದರೆ ನಮಗೆ ಕೇವಲ ಎರಡ್ನೂರು ಆನಿಗಳನ್ನೂ, ಹಿಂದುಸ್ಥಾನದ ಎರಡು ಸಾವಿರ ತಲವಾರಗಳನ್ನೂ, ಇಪ್ಪತ್ತು ಸಾವಿರ ಬಂಗಾರದ ತತ್ತಿಗಳನ್ನೂ, ಪ್ರತಿವರ್ಷದ ಕಪ್ಪುಕಾಣಿಕೆಯೆಂದು ಕೊಟ್ಟರಾಯಿತು. "

( ಈ ಪ್ರಕಾರ ಪತ್ರ ಓದುತ್ತಿದ್ದ ಮಂತ್ರಿಯು ಒಮ್ಮೆಲೆ ನಿಂತು ಪತ್ರದ ಮೇಲ್ಭಾಗವನ್ನು ಪುನಃನೋಡಿ ಕೆಳಭಾಗನೋಡತೊಡಗುವನು )

**ಪುರು:—** (ಮನಸ್ಸುಗೊಟ್ಟು ಕೇಳುತ್ತಿದ್ದವನು ತಟ್ಟನೆ, ಅಲೆಕ್ಝೆಂಡನು ಮತ್ತೇನು ಬರೆದಿರುವನು?

**ಮಂತ್ರಿ:—** ( ಪುನಃ ಈಪ್ರಕಾರ ಓದತೊಡಗುವನು. ) ಅದಕ್ಕೆ ಪ್ರತಿಯಾಗಿ, ನಿಮ್ಮ ರಾಜ್ಯದಮೇಲೆ ಯಾವದೇ ಮೂರನೆಶಕ್ತಿಯೊಂದು ದಾಳಿ ಮಾಡಿದರೆ ಅಲೆಕ್ಝೆಂಡರನ ಸೈನ್ಯವು ನಿಮ್ಮ ಸಹಾಯಕ್ಕಾಗಿ ಬರುವದು.

( ಮಂತ್ರಿಯು ಪತ್ರವನ್ನು ಸುತ್ತತೊಡಗುವನು. ಅವರೆಗೆ ಕೆಳಮುಖ ಮಾಡಿ ನಿಂತಿದ್ದ ಸಿಕಂದರನು, ಪೋರಸನ ಉತ್ತರ ಕೇಳುವದಕ್ಕಾಗಿ ಮುಖ ಮೇಲೆತ್ತುವನು.)

**ಪುರು:—** ರಾಜದೂತ! ನೀನು ಹೋಗಿ ನಿಮ್ಮ ಬಾದಶಹನಿಗೆ ಹೀಗೆ ಹೇಳು. ಈವರೆಗೆ ನಿವು ಹಿಂದುಸ್ಥಾನದ ತಲವಾರವನ್ನಷ್ಟೇ ನೋಡಿರುವಿರಿ, ಆದರಿನ್ನು ತಲವಾರದ ಝಳಪಣೆಯನ್ನೂ ನೋಡಿರಿ.

(ಈ ಪ್ರಕಾರದ ಪುರುರಾಜರ ಉತ್ತರದಿಂದ ದರ್ಬಾರದ ಎಲ್ಲ ಜನರ ಮುಖದ ಮೇಲೆ ಸಂತೋಷದ ಸೂಚನೆಯು ಕುಣಿಯತೊಡಗಿತು.

**ಸಿಕಂದರ:**— ನಮ್ಮ ಬಾದಶಹನು, ನಿಮಗಾಗಿ ನಿಮ್ಮ ಕಡೆಗೆ ಮಿತ್ರತ್ವದ ಕೈಚಾಚಿದ್ದಾರೆ.

**ಪುರು:**— ಇದು ಮಿತ್ರತ್ವದ ಕೈಯಲ್ಲ. ಇದು, ನಾವು ಒಬ್ಬ ದಾಸನಂತೆ ಅವನಮುಂದೆ ಮೊಣಕಾಲೂರಿ ಮುಜುರೆ ಮಾಡಬೇಕು. ಆಗವನು ಭಲೆ ಬಹಾದ್ದೂರಾ ! ಎಂದು ಡುಬ್ಬ ಚಪ್ಪರಿಸಬೇಕು, ಎನ್ನುವ ರೀತಿಯಲ್ಲಿದೆ. (ಗಂಭೀರತೆಯಿಂದ) ಪುರುರಾಜನು ಎರಡನೇಯವರ ತಲೆಯನ್ನು ತನ್ನೆದುರು ತಗ್ಗಿಸಿಕೊಳ್ಳುವದನ್ನು ಮಾತ್ರ ಕಲಿತಿದ್ದಾನೆ. ತನ್ನ ತಲೆಯನ್ನು ಅನ್ಯರ ಮುಂದೆ ಬಗ್ಗಿಸುವದನ್ನು ಕಲಿತಿಲ್ಲ.

**ಸಿಕಂದರ:**— ಹಾಗಿದ್ದರೆ ಅದಕ್ಕಾಗಿ ನಂಮಬಾದಶಹರು ನಿಮಗೆ ಸಹಾಯವನ್ನೂ ಮಾಡುವರು.

**ಪುರು:**— ಯಾವ ದಿನದಿಂದ ಪುರು; ಹೊರಗಿನವರ ಸಹಾಯ ತಗೊಂಡು ರಾಜ್ಯಭಾರ ಮಾಡುವನೋ ಅಂದಿನಿಂದ, ಅವನ ರಾಜ್ಯ ರಾಜ್ಯವಾಗುಳಿಯಲಾರದು. ಆಗದು ಭಿಕಾರಿಯ ಭಿಕ್ಷೆಯ ಮನೆಯಾಗುಳಿಯುವದು.

**ಸಿಕಂದರ:**— ಹಾಗಾದರೆ ನಾನು ಹೋಗಿ ಏನು ಹೇಳಲಿ?

**ಪುರು:**— ನಿಂಮ ಬಾದಶಹನು. ನಮಗಪಮಾನ ಮಾಡಿರುವದರಿಂದ, ಅದರ ಜಬಾಬನ್ನು ಕಠಾರಿಯಿಂದ ಕೊಡುವೆವು ಎಂದ್ಹೇಳು.

**ಸಿಕಂದರ:**— ನಾನು ಪುನಃ ತಮ್ಮಲ್ಲಿ ಅತಿ ವಿನಯದರ್ಜ ಮಾಡಿಕೊಳ್ಳುತ್ತೇನೆ. ನೀವು ಆಲೋಚಿಸಿರಿ. ಇದರ ಪರಿಣಾಮ ಏನಾಗುವದು. ಯುದ್ಧ ಮತ್ತು ಯುದ್ಧದ ಪರಿಣಾಮ ಇವೆರಡೂ ಮಹಾ ಅನರ್ಥಕಾರಕ.

**ಪುರು:**— ಯುದ್ಧದಲ್ಲಿ ಜನರು ಎಚ್ಚರಾಗುವರು. ಎಚ್ಚರಾಗಿ ಏಳುವರು, ತಕ್ಷಣ ಜೀವನ ಮೈದಾನದಲ್ಲಿ ಮುನ್ನಡೆಯುವರು.

**ಸಿಕಂದರ:**— ಆದರೆ ಯಾರು ನಿರ್ಬಲರಾಗುವರೋ ಅವರು, ಯುದ್ಧದಲ್ಲಿ ನಿರ್ಜೀವ ಮತ್ತು ನಿರ್ನಾಮರಾಗುವರು. ಅಂಥಃ ಪ್ರಸಂಗದಲ್ಲಿ ಅವರು ತಮ್ಮನ್ನು ತಾವು ಉಳಿಸಿಕೊಳ್ಳಬೇಕಾದರೆ ವೈರಿಯ ವಿಜಯವನ್ನೊಪ್ಪಿ, ತಲೆ ತಗ್ಗಿಸಬೇಕಾದ ಪ್ರಸಂಗ ಬಂದರೆ, ತಲೆತಗ್ಗಿಸುವದೇ ಜಾಣತನ.

**ಪುರು:**— ರಾಜದೂತ! ನೀವು ನಿಮ್ಮ ಮೇರೆ ಮೀರಿ ಹೋಗುತ್ತಿದ್ದೀರಿ ಆದರೂ ನಿಮ್ಮನ್ನು ಕ್ಷಮಿಸುತ್ತೇನೆ. ಇರಲಿ, ಈಗ ನೀವು ಹೇಗಾದರೂ ನಿಮ್ಮ ಮೇರೆ ಮೀರಿ ಹೋಗಿರುವಿರಿ. ಆದ್ದರಿಂದ ನಾನಾದರೂ ನಿಮಗೊಂದು ಪ್ರಶ್ನೆ ಮಾಡುತ್ತೇನೆ. ನಿಮ್ಮ ಬಾದಶಹನು ಯಾವ ಶರ್ತಿನೊಡನೆ ಸ್ನೇಹ ಹಸ್ತವನ್ನು ಮುಂದೆ ಮಾಡಿರುವನೋ, ಅದೇ ಶರ್ತಿನೊಡನೆ ನಿಂಮ ಬಾದಶಹನಿಗೆ ಸ್ನೇಹ ಹಸ್ತ ಮುಂದೆ ಮಾಡಿದರೆ ಅದನ್ನು ಮರ್ಯಾದೆಯಿಂದ ಮುಟ್ಟುವನೋ ಅಥವಾ ಸಿಟ್ಟಿನಿಂದ ಕೊಡವಿಬಿಡುವನೋ?

**ಸಿಕಂದರ:**— ನಮ್ಮ ಬಾದಶಹನು ಜಗತ್ತನ್ನೇ ಗೆದೆಯಲು ಹುಟ್ಟಿದ್ದಾನೆ. ಹೊರ್ತು, ಸ್ನೇಹದ ಬಿಕ್ಷೆ ಬೇಡುವದಕ್ಕಾಗಿ ಅಲ್ಲ.

**ಪುರು:**— ಅಂದರೆ "ಪುರು", ದಾಸನಾಗಿರಲು ಹುಟ್ಟಿರುವನೆಂದು ನಿಮ್ಮ ಬಾದಶಹನಿಗೆ ಭಾವನೆ ಇದೆ ಏನು? ಪುರು ಹುಟ್ಟಿದ್ದು, ಪುರುಷನಂತೆ ತನ್ನ ದೇಶದ ಧ್ವಜ ಎತ್ತಿ ಕಟ್ಟುವದಕ್ಕಾಗಿ. ಮಂಣು ಗೂಡಿಸುವದಕ್ಕಾಗಿ ಅಲ್ಲ. ( ಮಂತ್ರಿಯ ಕಡೆಗೆ ನೋಡಿ ) ಮಂತ್ರಿಗಳೇ! ಮಹಾರಾಜ ಸಿಕಂದರನ ದೆಶೆಯಿಂದ ಈ ರಾಜ ದೂತರ ಕೈಯಲ್ಲಿ ಮುತ್ತು ರತ್ನಗಳನ್ನು ಕೆಚ್ಚಿದ ಎರಡು ಬಂಗಾರದ ರೊಟ್ಟಿಗಳನ್ನು ಕೊಡಿರಿ.

( ದರ್ಬಾರದವರೆಲ್ಲ ಆಶ್ಚರ್ಯದಿಂದ ಒಬ್ಬರ ಮುಖ ಒಬ್ಬರು ನೋಡತೊಡಗುವರು. ಅಮರ, ಸಮರರು ನಸುನಗುವರು.)

**ಸಿಕಂದರ:**— ಬಂಗಾರದ ರೊಟ್ಟಿಯೆ ?

**ಪುರು:**— ಹೌದು, ನಿಮ್ಮ ಬಾದಶಹನ ಹೊಟ್ಟೆ ಹಸಿದಿದೆ. ಆದರೆ ಅನ್ನ ಬೇಕಾಗಿಲ್ಲ, ಅವನಿಗೆ ಬೇಕಾಗಿದ್ದು ರತ್ನಗಳಿಂದ ತಯಾರಿಸಿದ

ಬಂಗಾರದ ರೊಟ್ಟಿಗಳು. ಅವುಗಳಿಗಾಗಿ ಹೊಟ್ಟೆ ಹಸಿದಿದೆ. ಹಾಗಿಲ್ಲದಿದ್ದರೆ ಈಪ್ರಕಾರ ಜಗತ್ತಿನ ಸುಖ ಶಾಂತಿಗಳನ್ನು ಹಾಳು ಮಾಡುತ್ತ ತಿರುಗುತ್ತಿರಲಿಲ್ಲ.

ಸಿಕಂದರ:— ಮಹಾರಾಜ! ನೀವು ನನ್ನೆದುರಿನಲ್ಲಿ ನಮ್ಮ ಬಾದಶಹನ ಅಪಮಾನ ಮಾಡುತ್ತಿರುವಿರಿ, ಹೀಗೆ ಮಾತಾಡುತ್ತಿದ್ದ ನೀವು, ಇಲ್ಲಿರದೆ ನಮ್ಮ ಬಾದಶಹನೆದುರು ಇದ್ದಿದ್ದರೆ ಆಗನಿಮ್ಮಬಾಯಿಂದ ಒಂದು ಶಬ್ದ ಸಹ ಹೊರಡುತ್ತಿರಲಿಲ್ಲ.

ಪುರು:— (ನಸುನಕ್ಕು) ನಾನೀಗ ಏನು ಮಾತಾಡುತ್ತಿರುವೆನೋ ಅದನ್ನು ನಿಮ್ಮ ಬಾದಶಹನ ಎದುರಿನಲ್ಲಿಯೇ ಮಾತಾಡುತ್ತಿದ್ದೇನೆ. (ಮಂತ್ರಿ ಆಶ್ಚರ್ಯದಿಂದ ಸಿಕಂದರನನ್ನು ನೋಡುವನು)

ಸಿಕಂದರ:— ನೀವು ಏನನ್ನುತ್ತಿರುವಿರಿ?

ಪುರು:— (ಪ್ರತಿಯೊಂದು ಶಬ್ದಕ್ಕೆ ಜೋರುಕೊಟ್ಟು) ನಾನು ಈಗ ಏನು ಮಾತಾಡುತ್ತಿರುವೆನೋ ಅದನ್ನು ನಿಮ್ಮ ಬಾದಶಹನ ಎದುರಿನಲ್ಲಿ ಮಾತಾಡುತ್ತಿದ್ದೇನೆ. ಇಂದಿನ ನಮ್ಮ ರಾಜದರ್ಬಾರದಲ್ಲಿ, ಈಗಿನ ವೇಳೆಯಲ್ಲಿ. ಸಿಕಂದರನ ರಾಜದೂತನಿಲ್ಲ! ರಾಜದೂತನ ವೇಷದಲ್ಲಿ ಸ್ವತಃ ಸಿಕಂದರ ನಿಂತಿದ್ದಾನೆ.

(ದರ್ಬಾರದವರೆಲ್ಲ ಬೆಚ್ಚಿ ಬೀಳುವರು.)

ಸಿಕಂದರ:— (ಬೆಚ್ಚಿಬೀಳುವ ನಟನೆಯಲ್ಲಿ) ಸಿಕಂದರ?

ಪುರು:— ಈಗ ನಾನು ಯಾರನ್ನು ನೋಡುತ್ತಿರುವೆನೋ ಅವನು ಸಿಕಂದರನ ರಾಜದೂತನಿರದೆ ಸ್ವತಃ ಸಿಕಂದರನಿದ್ದಾನೆ. ಇದನ್ನು ನೀವು ಅಲ್ಲಗಳೆಯುವಿರೇನು?

ಸಿಕಂದರ:— ಇಲ್ಲ ಅಲ್ಲಗಳೆಯುವದಿಲ್ಲ. ನಿಮ್ಮಲ್ಲಿ ನಿಜವನ್ನು ಕಂಡು ಹಿಡಿಯುವ ಮೂರನೇ ಕಣ್ಣು ಒಂದಿದೆ. ಅದಕ್ಕೆ ನಾನು ಗೌರವಿಸುವೆನು.

ಪುರು:— ಅದರ ಸಂಗಡ ಕತ್ತರಿಸಿ ಬಿಡುವ ಕಠಾರಿಯೂ ತಯಾರಿದೆ.

ಸಿಕಂದರ:— ಯಾವ ಕಠಾರಿಯು, ಎಂದು ನನ್ನನ್ನು ಕತ್ತರಿಸುವದನ್ನು

ಕಣ್ಣಾರೆ ನೋಡುವೆನೋ ಅಂದು, ಅದಕ್ಕೆ ನನ್ನ ಆದರದ ಗೌರವವಿದೆ. ಆದರೆ ಇಂದು ನನ್ನ ಈ ಧೈರ್ಯಕ್ಕೆ ಸಿಫಾರಸ್ ಮಾಡಲೇಬೇಕು.

**ಪುರು**:— ಈಗ ನಿಮ್ಮ ಧೈರ್ಯವನ್ನೇ ಕಟ್ಟಿ ಜೇಲಿನಲ್ಲಿಟ್ಟರೆ ?

**ಸಿಕಂದರ**:— ಪುರುನ ಹತ್ತಿರ ಚತುರನಲ್ಲಿರುವ ಚತುರ ಕಂಡುಗಳಿವೆ. ಆದರೆ ಎದೆಗಾರನ ಎದೆಯಿಲ್ಲ, ಎಂದು ಜಗತ್ತು ಅನ್ನದಿರರು.

**ಪುರು**:— ನಿಮ್ಮನ್ನು ಈಗ ಕೊಂದು ಬಿಟ್ಟರೆ ಅಧರಿಂದ ನಿಮಗೆ ಪಶ್ಚಾತ್ತಾಪವಾಗಲಿಕ್ಕಿಲ್ಲ. ಯಾಕಂದರೆ, ನಿಮ್ಮ ಧೈರ್ಯದ ಬುದ್ಧಿಗೇಡಿ ಕತೆ ಕೇಳಿ ಅದನ್ನು ಮಾನ್ಯ ಮಾಡಿದರೆ, ನನ್ನ ಅಥವಾ ನಿಮ್ಮ ಜೀವನದಲ್ಲಿಯೇ ಆಗಬಾರದ ಮಹಾ ತಪ್ಪನ್ನು ನಾನು ಮಾಡಿದಂತಾಗುವದು.

**ಸಿಕಂದರ**:— ನನ್ನನ್ನು ಕೊಂದು ನೀವು ಪಶ್ಚಾತ್ತಾಪ ಪಡಬೇಕಾದೀತು! ಜಗತ್ತಿನ ಒಬ್ಬ ಧೀರ ಮತ್ತು ವೀರ ಪುರುಷನನ್ನು ನಾಶಮಾಡಿದಂತಾಗುವದು.

**ಪುರು**:— (ಘಟ್ಟಿಸಿ ನಗುವನು.)

**ಸಿಕಂದರ**:— ನೀವು ನನ್ನನ್ನು ಕೊಂದರೆ, ಜಗತ್ತು ನಿಮಗೇನನ್ನುವದು? ಎಂಬ ವಿಷಯುವನ್ನೂ ಆಲೋಚಿಸಿರಿ.

**ಪುರು**:— ಇಷ್ಟು! ವಿಚಾರ ವಿವೇಚನೆಗಳಿದ್ದು ನೀವು, ಜಗತ್ತಿನ ಸುಖಶಾಂತಿಗಳಿಗೆ ಬೆಂಕಿ ಇಡುತ್ತಿರುವಿ. ಎಂಬ ವಿಚಾರ ನಿಮಗೆ ತಿಳಿಯಲಿಲ್ಲವೆ ? ನಿಮ್ಮೊಬ್ಬರ ಸಂತೋಷಕ್ಕಾಗಿ ಜಗತ್ತಿನ ಲಕ್ಷಾವಧಿ ಸಂಸಾರಿಗಳ ಕುತ್ತಿಗೆ ಕತ್ತರಿಸುತ್ತಿರುವಿರಿ. ನೀವು ಎತ್ತ ಹೋಗುವಿರೋ ಅತ್ತ ಮಹಾ ಮಾರಿಯನ್ನು ಬೆನ್ನತ್ತಿ ಕರೆದುಕೊಂಡು ತಿರುಗುತ್ತಿರುವಾಗ, ನಿಮಗೆ ಜಗತ್ತು ಏನನ್ನೂ ಅನ್ನುವದಿಲ್ಲ?

**ಸಿಕಂದರ**:— ಪುರುರಾಜರ ದರ್ಬಾರದಲ್ಲಿ ಬಂದ ಸಿಕಂದರನನ್ನು ಹಿಡಿದು ಕೊಲ್ಲುವದೆಂದರೆ ಅದು ಪುರುರಾಜನ ಹೇಡಿತನ ಮತ್ತು ಅಂಜುಬುರುಕತನ.

**ಪುರು**:— ಆದರೆ ಸಿಕಂದರನು, ಇರಾಣದ ಹೊರ್ತು ಪಡಿಸಿ ಉಳಿದ

ಮಿತ್ರರೂ,ಅಜ್ಞರೂ, ನಿರ್ದೋಷಿಗಳೂ ಆದ ಲಕ್ಷಾವಧಿ ಜನರನ್ನು ಅವರವರ ಮನೆಯಲ್ಲಿ ನುಗ್ಗಿ ಕೊಂದು ಬಂದ ಸಿಕಂದರನು ವೀರನೂ, ಶೂರನೂ, ಪ್ರಜಾಪಾಲಕನೂ ಆಗುವನಲ್ಲವೆ ? ಆದರೆ! ಆದೇ ಪುರು ತನ್ನ ದೇಶದ ಸ್ವತಂತ್ರ ರಕ್ಷಣೆಗಾಗಿ, 'ರಾಜ' ಎಂಬ ಹೆಸರಿನ ತೆರೆಯ ಮರೆಯಲ್ಲಿ ಮಾಡುತ್ತಿರುವ ಧರೋಡೆಕೋರನನ್ನು ಕೊಂದರೆ ಅವನು ಹೇಡಿ ! ನ್ಯಾಯ ಧರ್ಮವು ಇದನ್ನೇ ಹೇಳು ವದೆ? ಇಂಥ ನ್ಯಾಯವು ಕೇವಲ ಇರಾಣಕ್ಕಾಗಿರುವದೆ? ನ್ಯಾಯವು ನ್ಯಾಯವಾಗಿಯೇ ಇರುವದು. ನ್ಯಾಯ ಧರ್ಮದಲ್ಲಿ ಭಿನ್ನತೆ ಯಿಲ್ಲ ಪಕ್ಷಾಂಧತೆಯಿಲ್ಲ. ಅದರ ದೃಷ್ಟಿಯಲ್ಲಿ ಇರಾಣವೂ ಅಷ್ಟೆ, ಭಾರ ತವೂ ಅಷ್ಟೆ. ಜಗತ್ತಿನ ಜನಾಂಗದ ಪ್ರತಿ ವ್ಯಕ್ತಿಯೂ ಅಷ್ಟೇ. ಹಿಂದುಸ್ಥಾನವು ನಿಮಗೇನು ಕೇಡು ಮಾಡಿದೆ. ನಿಮ್ಮ ಕೈಯ ಲ್ಲಿಯ ರೊಟ್ಟಿ, ಮೈಮೇಲಿನ ಅರಿವೆ, ಮನಸ್ಸಿನಲ್ಲಿಯ ದೇಶಭಕ್ತಿ ಇವುಗಳನ್ನೇನಾದರೂ ನಾವು ಕಸಿದುಗೊಂಡಿರುವೆವೋ ಹೇಗೆ? ನಿಮ್ಮ ಸ್ವತಂತ್ರತೆಯು, ನಿಮ್ಮ ಮನಸ್ಸಿನ ಇಚ್ಛೆಯ ವಿರುದ್ಧವಾಗಿ ನಮ್ಮ ದುರು ತಲೆ ತಗ್ಗಿಸುವಂತೆ ನಾವು ಒತ್ತಾಯವನ್ನೇನಾದರೂ ಮಾಡಿ ರುವೆವೋ! ಹೇಗೆ ? ಹಾಗಿಲ್ಲದಿದ್ದರೆ ಯಾವ ನ್ಯಾಯಕ್ಕನುಸಾರವಾಗಿ ಹಿಂದುಸ್ಥಾನವನ್ನು, ನಿನ್ನ ದಾಸ್ಯದಲ್ಲಿಟ್ಟುಕೊಳ್ಳಲು ಪ್ರಯತ್ನಿ ಸುತ್ತಿರುವಿರಿ?

**ಸಿಕಂದರ:**— ತನ್ನ ರಾಜ್ಯವನ್ನು ಹೆಚ್ಚಿಸದೆ ಸಾಯುವ ಬಾದಶಹನು ಬಾದಶಹನಲ್ಲ.

**ಪುರು:**— ಕೈಯಲ್ಲಿ ಸಿಕ್ಕ ಕಡುವೈರಿಯನ್ನು ಬಿಟ್ಟು ಬಿಡುವ ಬಾದಶ ಹನು ಏನಿರುವನು ?

**ಸಿಕಂದರ:**— ನಾನಿಷ್ಟೆ ಬೇಳಬಲ್ಲೆನು, ಒಬ್ಬನೇ ಒಬ್ಬನ ಮೇಲೆ ಈ ಎಲ್ಲ ಜನರು ದಾಳಿ ಮಾಡುವದು ನ್ಯಾಯವಾಗಲಾರದು

**ಪುರು:**— ಹಾಗಾದರೆ ಸಿಕಂದರನ, ಒಂದು ಲಕ್ಷ ಇಪ್ಪತ್ತು ಸಾವಿರ ಸೈನ್ಯ ದೊಡನೆ, ಪುರುನ ಕೇವಲ ಮೂವತ್ತು ಸಾವಿರ ಸೈನ್ಯದಮೇಲೆ ಏಕ ಕಾಲಕ್ಕೆದಾಳಿ ಮಾಡುವದು ನ್ಯಾಯವೇನು? ನೀವು ನಿಮ್ಮ ತೊಂಬತ್ತು

ಸಾವಿರ ಸಿಪಾಯಿಗಳಿಗೆ, ನೀವು ಒಂದು ಕಡೆ ಸುಮ್ಮನೆ ನಿಂತು ಬಿಡಿರಿ, ಪುರುನ ಮೂವತ್ತು ಸಾವಿರ ಸಿಪಾಯಿಗಳೊಡನೆ ನಮ್ಮ ಮೂವತ್ತು ಸಾವಿರ ಸಿಪಾಯಿಗಳಷ್ಟೇ ಯುದ್ಧ ಮಾಡಲಿ, ಎಂದು ಆಜ್ಞೆ ಮಾಡುವಿರೇನು ? ಅದು ಹೋಗಲಿ ನೀವು ನಿಮ್ಮ ದೇಶದ ರಾಣಿಯೊಡನೆ ಯುದ್ಧ ಮಾಡುವ ಕಾಲಕ್ಕೆ ರಾಣಿಯ ಸೈನ್ಯ ಕ್ಕಿಂತಲೂ ನಿಂಮ ಸೈನ್ಯ ಹೆಚ್ಚಿರದಂತೆ ಎಚ್ಚರಿಕೆ ವಹಿಸಿದ್ದರೇನು? ರಾಣಿಯು ಸೈನ್ಯಕ್ಕಿಂತಲೂ ನಿಂಮ ಸೈನ್ಯ ಹೆಚ್ಚಿದ್ದಿಲ್ಲವೇನು ? ಹಾಗಿಲ್ಲದಿದ್ದರೆ ಈಗೇಕೆ ಈ ಮಾತುಗಳು. ನಿನೊಬ್ಬನೇ ನಮ್ಮ ಕೈಯಲ್ಲಿ ಸಿಕ್ಕು ಬಿದ್ದಿರುವದರಿಂದ ಪಾರಾಗಿ ಹೋಗಲು, ಈ ಮಾತುಗಳನ್ನು ಉಪಯೋಗಿಸುತ್ತಿರುವಿಯೇನು ?

**ಸಿಕಂದರ:—** ಹಾಗಾದರೆ ಹೊಡೆಯಿರಿ! ಸಿಕಂದರನು ಸಾವಿಗೆ ಹೆದರುವದಿಲ್ಲ ಅವನ ಸಾವು ಅವನ ಜೀವನಕ್ಕಿಂತಲೂ ಹೆಚ್ಚು ಪ್ರಭಾವಶಾಲಿಯಾಗಿರುವದೆಂಬುದನ್ನಾದರೂ ಕಂಡುಕೊಳ್ಳಿರಿ.

(ಸಿಕಂದರನು ಎದೆಯಮೇಲೆಕೈಯಿಟ್ಟುಕೊಂಡುನಿಲ್ಲುವನು.)

**ಪುರು:—** ರೋಗಿಯಾಗಿ ಹುಟ್ಟಿದವನ ಮರಣವು ಶ್ರೇಷ್ಠವಾಗಲಾರದು. ಅಂಥವರ ಮರಣದಿಂದ ಜಗತ್ತಿನ ಜನಾಂಗವು, ವಿಶ್ರಾಂತಿಯ ಉಸಿರಾಡಿಸುವದು. ಅವರ ಮರಣದಿಂದ ರೋಗಿ ಕೈಬಿಟ್ಟು ಹೋಗಿ ಬಹಳ ಒಳ್ಳೇಯದಾಯಿತು ಎಂದು ಮಾತಾಡುವರು.

**ಸಿಕಂದರ:—** ನಿಮ್ಮ ಈ ದರ್ಬಾರದಲ್ಲಿಯ ಎಲ್ಲ ಜನರ ಕೈಯಲ್ಲಿಯೂ ಕಠಾರಿಗಳುಂಟು. ಅವರು ತಮ್ಮ ತಮ್ಮ ಕಠಾರಿಗಳನ್ನು ಒರೆಯಿಂದ ಹೊರಗೆ ತೆಗೆಯುವದಿಲ್ಲೆಂದು ಪ್ರತಿಜ್ಞೆ ಮಾಡಲಿ.

**ಪುರು:—** ನಿಮ್ಮ ಮನಸ್ಸಿನ ವಿಚಾರವನ್ನು ಈಗಲೆ ಪೂರೈಸಿಕೊಡುತ್ತಿದ್ದೆನು. ನಿಮ್ಮ ಒಂದೊಂದೆ ಅವಯವಗಳನ್ನು ಕತ್ತರಿಸಿ ಒಗೆಯುತ್ತಿದ್ದೆನು.ಆದರೆ ಕೆಡಕನಿಸುತ್ತದೆ. ಯಾಕಂದರೆ ನೀವುರಾಜದೂತನ ವೇಷದಲ್ಲಿರುವಿರಿ. ನಂಮ ಧರ್ಮವು ನಮ್ಮನ್ನು ತಡೆಯುತ್ತಿದೆ.

( ಸಿಕಂದರನು ಆಶ್ಚರ್ಯದಿಂದ ನೋಡುವನು. )

**ಪುರುಃ**— ಹೋಗಿರಿ, ನೀವು ಸ್ವತಂತ್ರರಿರುವಿರಿ ನಮ್ಮ ದೇಶದ ಯಾವ ಮನುಷ್ಯನೂ ನಿಮ್ಮನ್ನು ತಡೆಯಲಾರನು ಒಂದುವೇಳೆ ತಡೆದರೆ, ನಮ್ಮ ಸೈನ್ಯವು ನಿಮಗೆ ಸಹಾಯ ಮಾಡುವದು.

**ಮಂತ್ರಿ**:-- ಮಹಾರಾಜ ನನ್ನ ತಪ್ಪನ್ನು ಕ್ಷಮಿಸಿರಿ.

**ಪುರುಃ**— ( ನಗುತ್ತ ) ನೀವು ಏನು ಹೇಳಬೇಕೆನ್ನುವಿರಿ?

**ಮಂತ್ರಿಃ**— ಕೈಗೆ ಸಿಕ್ಕ ವೈರಿಯನ್ನು ಬಿಟ್ಟುಬಿಡುವದು ಮತ್ತು ನಮ್ಮ ಸೋಲನ್ನು ಕೊಂಡುಕೊಳ್ಳುವದು ಎರಡೂ ಒಂದೇ ಎಂದು ರಾಜ ನೀತಿಯು ಹೇಳುವದು.

**ಪುರು**: - ನೀವನ್ನುವದು ನಿಜ. ವೈರಿ ವೈರಿಯಾಗಿಬಂದಿಲ್ಲ. ರಾಜದೂತ ನಾಗಿ ಬಂದಿದ್ದಾನೆ. ಅವನೊಡನೆ ರಾಜದೂತನ ವ್ಯವಹಾರವನ್ನೇ ಮಾಡಬೇಕು. ರಾಜದೂತ! ಇನ್ನು ಮೇಲೆ ನಮ್ಮ ಭೆಟ್ಟಿಯು ಯುದ್ಧ ಮೈದಾನದಲ್ಲಾಗುವದು. ಆಗ ನಿವು ರಾಜದೂತನ ವೇಷ ದಲ್ಲಿಯೂ ಒಬ್ಬಂಟಿಗನಾಗಿಯೂ ಇರಲಿಕ್ಕಿಲ್ಲವೆಂದು ನನಗೆ ವಿಶ್ವಾಸ ವಿದೆ. ಮತ್ತು ಆಗ ನಿಮ್ಮೊಡನೆ ನಮ್ಮ ಮಾತಿನ ಮಲ್ಲಯುದ್ಧ ವಾಗಲಿಕ್ಕಿಲ್ಲ. ಕಠಾಠಿಯ ಖಾಡಾಖಾಡಿ ಯುದ್ಧವಾಗುವದು.

( ಸಿಂಹಾಸನದ ಮೇಲೆಕೂತ ಪುರುರಾಜನು. ಎದ್ದು ನಿಲ್ಲುವನು. ಆಗ ಇಡೀ ದರ್ಬಾರವೇ ಎದ್ದು ನಿಲ್ಲುವದು. )

**ಪುರುಃ**— ( ಸಿಂಹಾಸನದಿಂದಿಳಿದು ) ಮಂತ್ರಿಯವರೇ! ಸಿಕಂದರ ಬಾದ ಶಹರನ್ನು, ನಮ್ಮ ರಾಜಸೇನೆಯ ರಕ್ಷಣೆಯಲ್ಲಿ ನದಿವರೆಗೆ ಕಳಿಸಿ ಕೊಡಿರಿ. ಅವರಿಗೆ ಯಾವ ಅಪಾಯವೂ ಆಗದಂತೆ ಎಚ್ಚರಿಕೆ ವಹಿ ಸಿರಿ. ( ಸಿಕಂದರನನ್ನು ಕುರಿತು ) ಯುನಾನಾಧೀಶ ನಮಸ್ಕಾರ!

**ಸಿಕಂದರ**:— ಪುರು ಮಹಾರಾಜ, ನಾನು ಈ ವರೆಗೆ ಯಾರಿಗೂ ಶರಣು ಮಾಡಿಲ್ಲ. ಅದರಿಂದು ನಿಮಗೆ ಶರಣು ಮಾಡುವೆನು. ಯಾಕಂದರೆ ನೀವು ಬಹದ್ದೂರರಿರುವಿರಿ.

(ಸಿಕಂದರ ಮಹಾರಾಜನಿಗೆ ಯುನಾನದ ಪದ್ಧತಿಯಂತೆ ಸಲಾಮು ಮಾಡುವನು. )

# ೧೫ ನೇ ದೃಶ್ಯ

**ಸ್ಥಳ.** -- ಸಿಕಂದರನ ಸೈನ್ಯಠಾಣೆ. **ವೇಳೆ:**— ಸಾಯಂಕಾಲ.

( ಸಿಕಂದರ ಮತ್ತು ಸಿಕಂದರನ ಹಿಂದೆ ಶೆಲುಕ್ಯಸ, ಏರಟೆಗಣೇಶ, ಮತ್ತು ಅಂಭಿರಾಜ ಇವರು ಬರುವರು. ಸಿಕಂದರ ಹೇಳುತ್ತಿರುವನು,ಉಳಿ ದವರೆಲ್ಲರೂ ಕೇಳುತ್ತಿರುವರು. )

**ಸಿಕಂದರ:**— ನಾನು ಪುರುರಾಜನನ್ನು ನೋಡಿದೆ. ನೋಡಿ ಆನಂದ ಗೊಂಡೆ. ಅವನು ಮನುಷ್ಯನಲ್ಲ ಮಹಾಪುರುಷನಿದ್ದಾನೆ. ಮಾನವ ಕುಲದ ಮೇರುಪರ್ವತದಂತಿದ್ದಾನೆ. ಮಾನವ ಧರ್ಮದ ತೋಪಿ ನಂತಿದ್ದಾನೆ. ದೇವದೂತನಂತಿದ್ದಾನೆ. ಅವನು ಬಾಗುವದಕ್ಕೆ ಹುಟ್ಟಿಲ್ಲ. ಒಂದು ವೇಳೆ ಅವನು ಬಾಗಿದರೆ ಜಗತ್ತು ಬಡತನದಲ್ಲಿ ಬೀಳ ಬೇಕಾದೀತು

**ಏರಟೆಗಣೇಶ:** – ದೊರೆಗಳು ಇಂಥ ಶಬ್ದಗಳನ್ನು, ಯಾವ ವೈರಿಗೂ ಉಪಯೋಗಿಸಿಲ್ಲ.

**ಸಿಕಂದರ:**— ಇಂಥ ವೈರಿಯು ಈವರೆಗೂ ಭೆಟ್ಟಿಯಾಗಿದ್ದಿಲ್ಲ. ಅವನು ಶೂರನಿದ್ದಂತೆ ಸಭ್ಯನೂ ಇರುವನು. ಕೈಯಲ್ಲಿ ಕಠಾರಿ ಇದ್ದರೂ,ಕೈಗೆ ಸಿಕ್ಕ ವೈರಿಯನ್ನು ಕ್ಷಮಿಸಿ ಬಿಡುವ ಕ್ಷಮಾ ಗುಣವೂ ಅದೆ. ತಿಳು ವಳಿಕೆಯೂ ಅದೆ. ಮತ್ತೊಬ್ಬರಿಗೆ ತಿಳಿಸಿ ಹೇಳುವ ಸಾಮರ್ಥ್ಯವೂ ಅದೆ.

**ಯುಮುನೀಸ:**— ನಮಗೀಗ ಯಾವ ಅಪ್ಪಣೆ ಕೊಡುವಿರಿ?

**ಸಿಕಂದರ:**— ನಮ್ಮ ಸರ್ವ ಶಕ್ತಿಯನ್ನು ಸಂಗ್ರಹಿಸು. ಪರ್ವತವನ್ನು ಎದುರಿಸಿ ಪುಡಿಮಾಡೋಣ. ಆ ಮಹಾ ಪುರುಷನನ್ನು ಮಣ್ಣು ಮುಕ್ಕಿಸೋಣ.

**ಶೆಲುಕ್ಯಸ:** — ನೀವು ಅಪ್ಪಣೆ ಕೊಡಿರಿ, ಅಪ್ಪಣೆ ಪಾಲಿಸಲು ನಮ್ಮ ಸೈನಿ ಕರು ಸದಾ ಸಿದ್ಧರಿರುವರು.

**ಸಿಕಂದರ:**— ನನಗೆ ಸಂತೋಷವಾಯಿತು. ಆದರೆ ಪುರುರಾಜನ ರಕ್ತವೂ ಕಾಯ್ದಿದೆ. ಇದು ನಿಮ್ಮ ಲಕ್ಷ್ಯದಲ್ಲಿರಲಿ.

**ಅಂಭಿರಾಜ**— ನಿಮ್ಮನ್ನು ತಡೆದು ನಿಲ್ಲಿಸುವಷ್ಟು ಸಾಮರ್ಥ್ಯವು ಅವನಿಗೆ ಇಲ್ಲವೆಂದು ಧೈರ್ಯವಾಗಿ ಹೇಳುತ್ತೇನೆ. ಯಾರು ಒಳಗೆ ಮಾತಾಡುವರೋ ಅವರಿಂದ ಯಾವ ಕೆಲಸವೂ ಆಗುವದಿಲ್ಲ

**ಸಿಕಂದರಃ**— ( ನಗುತ್ತ ) ನೀವು ಈವರೆಗೂ ಪುರುರಾಜನನ್ನು ನೋಡಿದಂತೆ ಕಾಣುವದಿಲ್ಲ.

**ಅಂಭಿರಾಜಃ**— ಕ್ಷಮಿಸಿರಿ, ನಿಮ್ಮ ಕಲ್ಪನೆ ತಪ್ಪಿದೆ. ನಾನು ಪುರುರಾಜನನ್ನು ಅನೇಕ ಸಲ ನೋಡಿದ್ದೇನೆ.

**ಸಿಕಂದರಃ**— ನೀವು ಅವನನ್ನು ನೋಡಿರಬಹುದು. ಆದರೆ ಅವನನ್ನು ಅರಿತುಕೊಂಡಿಲ್ಲ. ಅವನನ್ನು ಅರಿತುಕೊಳ್ಳಬೇಕಾದರೆ ಸಿಕಂದರನ ಬುದ್ಧಿ ಬೇಕು. ಅವನು ತನ್ನ ಜೀವವನ್ನೇ ಮಾರಿಕೊಳ್ಳಬಹುದು, ಆದರೆ ತನ್ನ ಮಾನವನ್ನೆಂದೂ ಮಾರಿಕೊಳ್ಳನು.

**ಅಂಭಿರಾಜಃ**— ಆದರೆ ನಾನಿಷ್ಟು ಕೇಳಬಲ್ಲೆನು ನಿಮ್ಮ ಶಕ್ತಿಯ ಮುಂದೆ ಅವನ ಶಕ್ತಿ ನಿಲ್ಲಬಹುದೆ?

**ಸಿಕಂದರಃ**— ನಿಮ್ಮ ಶಕ್ತಿ ನಮ್ಮ ಶಕ್ತಿಯಲ್ಲಿ ಕೂಡಿಕೊಂಡರೆ, ಆಗವನ ಶಕ್ತಿ ನಿಲ್ಲಲಾರದು.

**ಅಂಭಿರಾಜ**:— ಹಾಗಾದರೆ ನಾನು ಮತ್ತು ನನ್ನೆಲ್ಲ ಸೈನ್ಯವೂ ತಮ್ಮ ಸಹಾಯಕ್ಕಿರುವದೆಂದು ವಿಶ್ವಾಸ ಕೊಡಬಲ್ಲೆನು.

**ಸಿಕಂದರಃ**— ಯುದ್ಧದಲ್ಲಿ ಗೆದ್ದನಂತರ ನಿಮ್ಮ ನೆನಪು ನನಗಿರುವದೆಂದು ಪುನಃ ನಿಮ್ಮೊಡನೆ ಕರಾರು ಮಾಡಿಕೊಳ್ಳುತ್ತೇನೆ.

**ಅಂಭಿರಾಜ**:— ನನಗೆ ನಿಮ್ಮ ಮೇಲೆ ವಿಶ್ವಾಸವಿದೆ

( ಅಂಭಿರಾಜನು ಹೊರಟು ಹೋಗುವನು.)

**ಶೆಲುಕ್ಯಸಃ**— ಮಹಾರಾಜನು ಪ್ರಾಮಾಣಿಕನಿರುವನು.

**ಸಿಕಂದರಃ**— ಅವನಿಗೆ ಪ್ರಾಮಾಣಿಕನೆನ್ನಬೇಡ, ತನ್ನ ದೇಶವನ್ನೇ ಮಾರುವ ಈ ವ್ಯಕ್ತಿಯಮೇಲೆ ನನಗೆ ವಿಶ್ವಾಸವಿಲ್ಲ ಇಂಥವನಿಗೆ ಪ್ರಾಮಾಣಿಕನೆಂದು ಅನ್ನುವದಾದರೂ, ಹೇಗೆ?

**ಶೆಲುಕ್ಯಸ**: ಬಾದಶಹರ ವಿಚಾರವು ಯೋಗ್ಯವಿದೆ.

**ಸಿಕಂದರ**:— ನಮಗೆ ಅವನ ಆವಶ್ಯಕತೆಯಿದೆ.

ಅವನಮುಂದೆ ಅವನನ್ನು ಹೊಗಳಬೇಕಾಗಿದೆ. ಯಾಕಂದರೆ ಯಾ

ವನ ಕೆಲಸವಾಗಬೇಕಾಗಿದೆಯೋ ಅವನು, ತನ್ನ ಅಭಿಪ್ರಾಯ ಮತ್ತು ಮನಸ್ಸು ಇವೆರಡನ್ನೂ ಮುಚ್ಚಿಡಬೇಕು. ಯಾವನು ಸದಾ ಸತ್ಯವನ್ನೇ ಹೇಳುವನೋ, ಅವನು ಪ್ರಪಂಚದ ವ್ಯವಹಾರಕ್ಕೆ ಅಯೋಗ್ಯನಾಗುವನು. ಸಾಯುವವರೆಗೂ ಅವನಿಗೆ ಸುಖ ದೊರೆಯಲಾರದು. ಆದರೆ ಅವನು ಸತ್ತರೆ, ಅವನ ಚಿತ್ರ ತಂದು ಹಾಕಿ ಪೂಜೆ ಮಾಡುವರು.

( ಸಿಕಂದರನು ಅತ್ತಿತ್ತ ಅಡ್ಡಾಡುವನು, ಯಮುನೀಸ, ಏರಟಿ ಗಣೇಶ, ಶೆಲುಕ್ಯಸರು, ನಿಂತಿರುವರು. ಸಿಕಂದರನು ಏರಟಿಗಣೇಶನ ಮುಂದೆ ಬಂದು ನಿಲ್ಲುವನು )

**ಸಿಕಂದರ:**— ಏರಟಿ ಗಣೇಶ ! ಈ ಯುದ್ಧದಲ್ಲಿ ನಾವು ನಿಶ್ಚಯವಾಗಿ ಗೆಲ್ಲುವೆವು. ಯಾಕಂದರೆ ಹಿಂದುಸ್ಥಾನದಲ್ಲೀಗ ತಮ್ಮ ಹಿತ ಎಣಿಸುವ ಜನರಿರುವರೇ ಹೊರ್ತು, ತಮ್ಮ ದೇಶದ ಹಿತದ ಕಡೆಗೆ ಲಕ್ಷ್ಯಕೊಡದ ಜನರಿರುವರು. ಅವರು ಅನ್ಯರನ್ನು ತನ್ನವರೆಂದು ತಿಳಿಯುವರೇ ವಿನಹ, ತನ್ನ ಒಡಹುಟ್ಟಿದವರನ್ನೇ ಅನ್ಯರೆಂದು ತಿಳಿಯುವರು. ಇವರ ವಿಚಾರದಲ್ಲಿ ವಿವೇಚನೆಯಿಲ್ಲ, ದೃಷ್ಟಿಯಲ್ಲಿ ಶುದ್ಧತೆಯಿಲ್ಲ. ದೂರಾಲೋಚನೆಯೆಂತೂ ಮೊದಲೇಯಿಲ್ಲ. ತಮ್ಮ ಆತ್ಮ ಗೌರವ ಮಾರಿಕೊಂಡಾದರೂ ಆಯುಷ್ಯಾರಾಮುಗಳನ್ನು ಖರೀದಿ ಮಾಡಿಕೊಳ್ಳುವರು. ಆದರೆ ಯಾರು ಆತ್ಮ ಗೌರವ ಮಾರಿಕೊಳ್ಳುವರೋ ಅವರ ಜೀವನದಲ್ಲಿ ಸದಾ ಅರಾಮು ಎಂದೂ ದೊರೆಯಲಾರದು. ಅಂಥವರಿಗೆ ದೊರೆಯುವದು ಗುಲಾಮಗಿರಿ ಮಾತ್ರ.

**ಸಿಕಂದರ:**— ಗುಲಾಮನಿಗೆ ಅವನ ಜೀವನದಲ್ಲಿ ಆರಾಮು ದೊರೆಯಲಾರದು. ಮರ್ಯಾದೆಯಂತೂ ಮೊದಲೇ ದೊರೆಯಲಾರದು. ಅವರು ಕೇವಲ ಅನ್ಯರ ಆಶ್ರಯವನ್ನವಲಂಬಿಸುವರು. ಅಂಥವರಿಗೆ ಕೇವಲ ಶರಣು ಮಾಡುವದು ಗೊತ್ತಿದೆಯೇಹೊರ್ತು, ಶರಣು ಮಾಡಿಸಿಕೊಳ್ಳುವದು ಗೊತ್ತಿಲ್ಲ. ದೇವರ ದಯದಿಂದ ಅಂಭಿರಾಜನಂತಹ ಗುಲಾಮರು ಇರಾಣದಲಿಲ್ಲ

# ಅಂಕ ೨

## ದೃಶ್ಯ ೧

**ಸ್ಥಾನ:**— ನದಿಯ ದಂಡೆಯಮೇಲಿದ್ದ ಸಿಕಂದರನ ಡೇರೆಗಳು.

**ವೇಳೆ:**— ರಾತ್ರಿ

( ಭಿರುಗಾಳಿಯು ಸುಯ್ ಎಂದು ಸಪ್ಪಳಮಾಡುತ್ತ ಬೀಸತ್ತಲಿದೆ. ಗಾಳಿಯರಭಸಕ್ಕೆ ಸಿಕಂದರನ ಸೈನ್ಯತಾಣೆಯಲ್ಲಿಯ ಡೇರೆಗಳು ಹಾರಾಡುತ್ತಲಿವೆ. ಸಿಕಂದರ, ಶೆಲುಕ್ಯಸ, ಯಮುನೀಸ, ಮತ್ತು ಅಂಭಿರಾಜರು ಬಿರುಗಾಳಿಯ ಹೊಡೆತಕ್ಕೆ ಬಳಲಿ ಹೋಗಿರುವರು.)

**ಅಂಭಿರಾಜ:**— ಮಹಾರಾಜ ! ಬಹಳದೊಡ್ಡ ಭಿರುಗಾಳಿಯಿದು.

**ಸಿಕಂದರ:**— ಇದಕ್ಕೆ ನೀವು ಭಿರುಗಾಳಿಯನ್ನುವಿರೇನು ? ಇದು ದೇವರ ಆಟ. ಅವನ ಆಟದಲ್ಲಿ ನಮ್ಮ ಬುದ್ಧಿ ಶಕ್ತಿಗೆ ನಿಲುಕದ ಅನೇಕ ಘಟನೆಗಳು ಮೂಡಿ ಮಾಯವಾಗುವವು. ಅವನ ಆಟಗಳಿಂದ ಹೊರಗುಳಿಯಲು ಮಾನವನಿಂದ ಸಾಧ್ಯವಿಲ್ಲ. ಒಂದು ವೇಳೆ ಆ ಭಗವಂತನ ಆಟದಿಂದ ಹೊರಗುಳಿಯಲು ಪ್ರಯತ್ನಿಸಿದರೆ, ಅವನ ಕಾಕ ದೃಷ್ಟಿಗೆ ಕೈಯೊಡ್ಡಬೇಕಾಗುತ್ತದೆ. ಹಾಗೆ ಮಾಡದೆ ಅವನ ಆ ಆಟಗಳಲ್ಲಿ ಭಾಗವಹಿಸಿ, ಅವನ ಕೃಪಾದೃಷ್ಟಿಗೆ ಪಾತ್ರರಾಗಲು ಪ್ರಯತ್ನಿಸಬೇಕು.

**ಅಂಭಿರಾಜ:**— ಮಹಾರಾಜ! ಡೇರೆಗಳು ಹಾರಿಹೋಗಿ ಬಹಳ ಅನಾಹುತ ಆಗತೊಡಗಿದೆ.

**ಸಿಕಂದರ:**— ಅಲ್ಲ ಮಿತ್ರಾ! ಇದು ಅನಾಹುತವಲ್ಲ. ದೇವರ ಕೃಪಾದೃಷ್ಟಿಯಿದು. ಯಾಕಂದರೆಈಗ ಆಯುಷ್ಯ ಆರಾಂದಲ್ಲಿ ಕಾಲ ಕಳೆಯುವ ಹೊತ್ತಲ್ಲ. ನಾವು ಈಗಿಂದೀಗಲೇ ನದಿ ದಾಟಬೇಕು.

**ಶೆಲುಕ್ಯಸಃ—** ( ಭಯಗೊಂಡು ) ಆಲಂಪಸನಾ! ( ಚಕ್ರವರ್ತಿಗಳೇ! ) ಇಂಥ ಕರಾಳ ಕತ್ತಲೆ ಮತ್ತು ಭಯಂಕರ ಬಿರುಗಾಳಿಯಲ್ಲಿ?

**ಸಿಕಂದರ:—** ಗಾಳಿಯು ದೀಪವನ್ನಾರಿಸಬಹುದು, ಆದರೆ; ಬೆಂಕಿಯನ್ನು ಎಂದಿಗೂ ಆರಿಸದು. ಗಾಳಿ ಹೆಚ್ಚಾದಂತೆಲ್ಲ, ಬೆಂಕಿಯ ಬೇಗೆಯೂ ಹೆಚ್ಚಾಗುವದು.

**ಅಂಭಿರಾಜ:—** ಯುನಾನಾಧೀಶ ! ಮತ್ತೊಮ್ಮೆ....

**ಸಿಕಂದರ:—** ( ಅಂಭಿರಾಜನ ಭುಜಗಳನ್ನು ಚಪ್ಪರಿಸುತ್ತ ) ಯಾವನು ಜಗತ್ತನ್ನು ಗೆದಿಯಬೇಕೆಂದು ಯುನಾನದಿಂದ ಹೊರಟಿರುವನೋ ಅವನು ಭಿರುಗಾಳಿಗಾಗಲೀ ಕತ್ತಲೆಗಾಗಲೀ ಹೆದರುವದಿಲ್ಲ. ನಡೆಯಿರಿ, ಭಿರುಗಾಳಿಯಂಬಪರದೆಯ ಮರೆಯಲ್ಲಿ ಮೂವತ್ತು ಸಾವಿರ ಸೈನಿಕರನ್ನು ತೆಗೆದುಕೊಂಡು, ಹದಿನೈದಿಪ್ಪತ್ತು ಮೈಲು ಮುಂದೆ ಹೋಗಿ ನದಿ ದಾಟೋಣ. ಆಕಡೆಯಿಂದ ನಾವು ದಾಳಿ ಮಾಡೋಣ ( ಯಮುನೀಸನ ಕಡೆ ನೋಡುತ್ತ ) ಯಮುನೀಸನು ಈ ಕಡೆಯಿಂದ ನದಿ ದಾಟಿ ಬೆಳಗ್ಗೆ ದಾಳಿಮಾಡುವನು ( ಯಮುನೀಸನು ಮುಂದೆಬಂದು ನಿಂತು ಸಲಾಮು ಮಾಡುವನು. ) ಯಮುನೀಸ! ನಿನ್ನ ಜನರಿಗೆ ಹೇಳು, ನಮ್ಮ ದೇಶ ದೇವತೆಗೆ ಬಲಿ ಕೊಡುವದಕ್ಕಾಗಿ ಸೂರ್ಯೋದಯಕ್ಕೆ ಮುಂಚೆ, ಪುರುರಾಜನನ್ನು ಗೆದೆಯಲು ತಯಾರಾಗಿರಿ. ಶೂರ ಮತ್ತು ಧೀರರಿಗೆ ಅನುಕೂಲವಾದ, ಇಂಥ ಭಿರುಗಾಳಿಯಿಂದ ಕೂಡಿದ ಇಂದಿನ ಕತ್ತಲೆಯ ದಿನವು ನಮಗೆ ದೊರೆತದ್ದು ನಮ್ಮ ಸುದೈವ

( ಗಾಳಿ ಬೀಸ ತೊಡಗುವದು. ಸಿಕಂದರನು ತನ್ನ ಸಂಗಡಿಗರೊಡನೆ ಹೊರಟು ಹೋಗುವನು. )

## ಒಳನೋಟ ( ೧ )

**ಸ್ಥಳ :—** ನದಿಯದಂಡೆ **ವೇಳೆ :—** ರಾತ್ರಿ

( ಹಿಂದುಸ್ಥಾನದ ಸಿಪಾಯಿಗಳು ಒಂದು ಬಂಡೆಗಲ್ಲಮೇಲೆ ನಿಂತು ಪಹರೆ ಮಾಡುತ್ತಿದ್ದಾರೆ. )

**ಸೈನಿಕ:**— (ಜೋರಾಗಿ ಬೀಸುವ ಗಾಳಿಯಲ್ಲಿ ಮೇಲು ಧ್ವನಿಯಲ್ಲಿ) ಹುಷಾರ್ ! ಹುಷಾರ್ !! ವೈರಿಗಳು ನದಿದಾಟಿ ಬಂದಗಿಂದಾರ ಹುಷಾರ್ !

(ಮಿಂಚುವದು ಮತ್ತು ಆ ಸೈನಿಕನ ಹತ್ತರಿರುವ ಒಂದು ಗಿಡಕ್ಕೆ ಸಿಡಿಲು ಬಡೆದು ಅದು ಮುರಿದು ಬೀಳುವದು. ಆದರೂ ಅವನು ಮೊದಲಿನಂತೆ ಬಾಯಿಮಾಡಿ)

**ಸೈನಿಕ:** -- ಹುಷಾರ್ ! ನದಿ ದಾಟಗಿಟ್ಯಾರ್ ಹುಷಾರ್! ಹುಷಾರ್!!

**ಎರಡನೇ ಸಿಪಾಯಿ:**.... ಅಲ್ಲಪ್ಪಾ! ನದಿ ಶಾಂತ ಇದ್ದಾಗನೇ ಯಾರೂ ನದಿ ದಾಟಲಿಲ್ಲಾ. ಇಂಥಾ ಬಿರುಗಾಳಿಯಲ್ಲಿ ನದಿ ದಾಟುವ ಧೈರ್ಯ ಯಾರಿಗೆ ಬರುವದು?

## ಒಳನೋಟ (೨)

**ಸ್ಥಾನ:** ನದಿಯ ಆಚೆಯ ದಂಡೆ. **ವೇಳೆ:**— ರಾತ್ರಿ

( ಸಿಕಂದರ ಮತ್ತು ಅವನ ಸಂಗಡಿಗರು. ಸೈನಿಕರು)—

**ಸಿಕಂದರ:**— ನದಿಯು ನಮಗಾವ ಅಪಾಯ ಮಾಡಲಾರದು, ಎಂಬ ಸಂಗತಿಗಳನ್ನು ನಿಮಗೆ ಖಾತ್ರಿ ಮಾಡಿಕೊಡುವೆನು. ನದಿಗೂ ಗೊತ್ತಿದೆ, ನಾನು ಯುನಾನದ ರಾಜ ಪುತ್ರನೆನ್ನುವದು. ನಾನು ನದಿಗೆ ನುಗ್ಗಿದೊಡನೆ ಅದು ಸರಳ ಮಾರ್ಗಮಾಡಿ ಕೊಡುವದು. ಆಗ ನಮ್ಮ ಸಿಪಾಯಿಗಳು ಕೂಡಾ ನನ್ನ ಸಂಗಡ ಬರುವರು.

(ಸಿಕಂದನು ತನ್ನ ಕುದುರೆಯನ್ನು ನದಿಯಲ್ಲಿ ಬಿಡುವನು.)

**ಏರಟಿಗರೆಲ್ಲ:**— ( ಜೋರಾಗಿ )ಅಲೆಕ್ಝಾಂಡರ ಜಿಂದಾಬಾದ !

**ಸಿಕಂದರ:**— ( ಕೂಡಲೇ ಹೊರಳಿ ಬಾಯಿಮೇಲೆ ಬಟ್ಟಿಟ್ಟು ) ಸುಮ್ಮನಿರು. ಈಗ ಜಯಜಯಕಾರ ಮಾಡುವ ಹೊತ್ತಲ್ಲ. ಗದ್ದಲ ಮಾಡದಂತೆ ನದಿ ದಾಟುವ ಹೊತ್ತಿದು.

(ಸಿಕಂದರ ಮುಂದೆಮುಂದೆ ನಡೆಯುವನು, ಸೈನಿಕರು ಒಬ್ಬೊಬ್ಬರಾಗಿ ನದಿಯಲ್ಲಿ ಬೀಳುವರು.)

# ದೃಶ್ಯ ೨

**ಸ್ಥಳ:** ಪುರು ಮಹಾರಾಜನ ಮಹಲು **ವೇಳೆ:**—ಸೂರ್ಯೋದಯ
( ಮಹಾರಾಜಾ ಪುರು, ರಾಜಪುತ್ರರಾದ ಅಮರ ಮತ್ತು ಸಮರ, ಸೇನಾಪತಿ, ಮುಖ್ಯಮಂತ್ರಿ ಮೊದಲಾದವರೆಲ್ಲ ಕೂಡಿಕೊಂಡು ಮಾತಾಡುತ್ತ ಪ್ರವೇಶ ಮಾಡುವರು. ಹೊರಗೆ ಬೀಸುತ್ತಿರುವ ಬಿರುಗಾಳಿಯ ಶಬ್ದವು ಒಂದೇಸವನೇ ಕೇಳಿಬರುತ್ತಿರುವದು.)

**ಪುರು:**— ಅಲ್ಲಿ ಹಿಂದೂ ಸೈನಿಕರಿದ್ದರೆ, ಅವರು ನಿಶ್ಚಯವಾಗಿ ಅಬಿಸಾರ ರಾಜನ ಸೈನಿಕರಿರಬೇಕು. ಆದರೂ ನಾವು ಎಚ್ಚರಿಕೆಯಿಂದಿರಬೇಕು. ( ಅಮರನನ್ನು ಕುರಿತು ) ಅಮರ ! ನೀನು ಎರಡು ಸಾವಿರ ಸೈನಿಕರನ್ನೂ ಒಂದು ನೂರು ಆನೆಗಳನ್ನೂ ತಗೊಂಡು ಹೋಗು- ಆ ಸೈನ್ಯವು ಮಹಾರಾಜಾ ಅಬಿಸಾರನದಿದ್ದರೆ ಅವರನ್ನು ಸ್ವಾಗತಮಾಡು. ಸಿಕಂದರನ ಸೈನ್ಯವಾದರೆ ಯುದ್ಧಮಾಡು. ನಿನ್ನ ಬುದ್ಧಿ ಮತ್ತು ಶಕ್ತಿಗಳಮೇಲೆ ನನಗೆ ವಿಶ್ವಾಸವಿದೆ ಭಾರತ ಮಾತೆಗೆ ಜಯವಾಗಲಿ !

**ಅಮರ:**— ಭಾರತ ಮಾತೆಗೆ ಜಯವಾಗಲಿ !

( ಪುರುರಾಜನ ಹೊರ್ತಾಗಿ ಉಳಿದವರೆಲ್ಲರೂ ಹೊರಟು ಹೋಗುವರು. ಪುರುರಾಜನು ಸುಮ್ಮನೇ ನಿಂತಿರುವನು. ಆಗ ರಂಗಭೂಮಿಯಮೇಲೆ ಕತ್ತಲೆಯಾಗುವದು. ಆ ಕತ್ತಲೆಯಲ್ಲಿ ಯುದ್ಧದ ಕೋಲಾಹಲವು ಕೇಳಬರುವದು. ಆಗ ರಂಗಭೂಮಿಯಮೇಲೆ ಪುನಹ ಬೆಳಕು ಬೀಳುವದು. ಪುರುರಾಜನು ಎಲ್ಲಿ ನಿಂತಿದ್ದನೋ ಅಲ್ಲಿಯೇ ಸ್ಥಬ್ದನಾಗಿ ನಿಂತಿದ್ದನು. ಅವನ ಮುಂದೆ ಸಮರ, ಪ್ರಾರ್ಥನಾ, ರುಕ್ಸಾನಾ, ಮಹಾರಾಣಿ ಶರಿಕಾ ಮತ್ತು ಸೇನಾಪತಿ, ಮಂತ್ರಿ, ಕೆಲ ಸೈನಿಕರು ನಿಂತಿರುವರು )

**ಪುರು:**— ಯಾರು ಹೇಳುವರು ಅಮರ ಸತ್ತನೆಂದು, ಅಮರನು ಅಮರನಾಗಿರುವನು. ದೇಶಕ್ಕಾಗಿ ಪ್ರಾಣತೆತ್ತ ಆ ಸುಪುತ್ರನ ಹೆಸರು ಅಜರಾಮರವಾಗುಳಿಯುವದು. ಅದಕ್ಕಾಗಿ ನನಗೆ ಸಂತೋಷವಾಗುವದು.

( ಪ್ರಾರ್ಥನಾ ಮತ್ತು ರುಕ್ಸಾನಾ ಇಬ್ಬರೂ ಅಳತೊಡಗುವರು.)

ಪುರು:— ನಿಮ್ಮ ಕಣ್ಣಲ್ಲಿ ಕಣ್ಣೀರು ಕಾಣುತ್ತಿರುವವಲ್ಲಾ! ನಿಮ್ಮ ಮಹಾರಾಜನ ಕಡೆಗೆ ನೋಡಿರಿ, ಅವರ ಮಾತುಕೇಳಿರಿ ಆಗ ನಿಮ್ಮಲ್ಲಿಕೂಡ ಯುದ್ಧ ಮಾಡುವ ಉತ್ಸಾಹ ಬರುವದು. ರಾಜಕುಮಾರನ ನಗುಮುಖವನ್ನು ನೆನಿಸಿಕೊಳ್ಳಿರಿ. ಆಗ ನಿಮಗೂ ನಗೆಬರುವದು ಭಾರತಮಾತೆಗೆ ಜಯವಾಗಲಿ!

ಎಲ್ಲರೂ:— ಭಾರತಮಾತೆಗೆ ಜಯವಾಗಲಿ!

( ಮಹಾರಾಜಾ ಪುರು ಮತ್ತು ಶರಿತಾ ರಾಣಿಯವರನ್ನು ಬಿಟ್ಟು, ಉಳಿದವರೆಲ್ಲರೂ ಹೊರಟು ಹೋಗುವರು. ಶರಿತಾ ರಾಣಿಯ ಅಳು ಮುಖದ ಕಣ್ಣಲ್ಲಿ ಕಣ್ಣೀರು ಪುಟಿಯುತ್ತಿರುವವು. ಪುರುರಾಜನು ಸಾವಕಾಶವಾಗಿ ಆಕೆಯ ಭುಜದಮೇಲೆ ಕೈಯಿಡುವನು. ಆಗಾಕೆಯು ದುಃಖಿಸಿ ದುಃಖಿಸಿ ಅಳುವಳು. )

ಪುರು:— ನಿನ್ನ ತಾಯಿ ಕರಳು ಕತ್ತರಿಸುತ್ತಲಿದೆ ಎಂದು ಅಳುತ್ತಿರುವಿಯಲ್ಲವೆ? ನಾನೂ ಅವನ ತಂದೆ ಇರುವೆನೆಂಬುದನ್ನು ಲಕ್ಷ್ಯಕ್ಕೆ ತಂದುಕೊ! (ಕಣ್ಣಲ್ಲಿ ಪುಟಿಯುತ್ತಿರುವ ಕಣ್ಣೀರನ್ನು ತಡೆಯುತ್ತ ) ನೋಡು! ನಾನು ಅಳುತ್ತಿರುವದಿಲ್ಲ. ಅಳುವದರಿಂದ ಆಗುವದಾದರೂ ಏನು? ಯಾವದು ಎಲ್ಲಿಗೆ ಹೋಗಬೇಕಾಗಿತ್ತೋ ಅಲ್ಲಿಗೆ ಅದು ಹೋಗಿದೆ. ಅದನ್ನೀಗ ತಿರುಗಿ ತರುವದು ಬ್ರಹ್ಮನಿಂದಲೂ ಸಾಧ್ಯವಿಲ್ಲ.

ಶರಿತಾ:— ಅಂತೆಯೇ ಅಳು ಬರುತ್ತಿದೆ ಮಹಾರಾಜ!

ಪುರು:— ಅಳುವದರಿಂದ ಧೈರ್ಯಗೆಡುವದು ರಾಣಿ! ಈಗ ಧೈರ್ಯದ ಅವಶ್ಯಕತೆ ಎಷ್ಟಿರುವದೋ, ಅಷ್ಟು ಈವರೆಗೂ ಇದ್ದಿರಲಿಲ್ಲ. ಈಗ ಪ್ರತಿಜ್ಞೆ ಮಾಡು ಇನ್ನುಮುಂದೆ ಅಳುವದಿಲ್ಲೆಂದು.

ಶರಿತಾ:— ( ಉಕ್ಕಿಬರುವ ದುಃಖವನ್ನು ತಡೆಯುತ್ತ )ಅಳೂದಿಲ್ಲ ಮಹಾರಾಜ! ಅಳುವದಿಲ್ಲ. ಪ್ರತಿಜ್ಞೆ ಪೂರ್ವಕ ( ದುಃಖಿಸುತ್ತ) ಇನ್ನು ಅಳುವದಿಲ್ಲ. (ಜೋರಾಗಿ ಅಳುತ್ತ ಇನ್ನು ಅಳುವದಿಲ್ಲ. ಅಮರ ಹೊರಟುಹೋದ ಮಹಾರಾಜ! (ಅಳುತ್ತ) ನನ್ನ ಅಮರ!

**ಪುರು**:— ( ಆಕೆಯ ಬೆನ್ನ ಮೇಲೆ ಕೈಯಿಟ್ಟು) ಅಮರ ಎಲ್ಲಿಯೂ ಹೋಗಿಲ್ಲ. ಈಗವನು ನಮ್ಮ ಹೃದಯದಲ್ಲಿರುವನು. ಅವನನ್ನೀಗ ಯಮನು ಕೂಡ ತೆಗೆದುಕೊಂಡು ಹೋಗಲಾರನು.

( ಶರಿತಾ ರಾಣಿಯನ್ನು ಕೈಹಿಡಿದು ಒಳಗೆ ಕರೆದೊಯ್ಯುವನು.)

—‡‡—

## ದೃಶ್ಯ ೩

**ಸ್ಥಳ**:— ಪುರುರಾಜನ ಅರಮನೆ **ವೇಳೆ**:— ಪ್ರಾತಃಕಾಲ

( ಪುರು ರಾಜನು ಸೈನ್ಯದ ಉಡುಪಿನಲ್ಲಿರುವನು. ಆವನೆದುರು ರುಕ್ಸಾನಾ, ಪ್ರಾರ್ಥನಾ, ಮತ್ತು ಸಮರರು ನಿಂತಿರುವರು. ಒಮ್ಮಿಂದೊಮ್ಮೆಲೇ ಪುರುರಾಜನು ಸಿಂಹಾಸನದಿಂದೆದ್ದು ಹೀಗನ್ನುವನು. )

**ಪುರು**:— ದೇಶ ಮಾತೆಯ ಮಾನ ಉಳಿಸಲು ಹೊರಟ ನನಗೆ, ಮಂಗಲ ಹೇಳಿ ಕಳಿಸಿ ಕೊಡಿರಿ ! ಈ ವರೆಗೆ ನಾನುಂಡ ಉಪ್ಪಿನ ಸಫಲತೆ ಇಂದು ದೊರೆಯಲಿ.

**ರುಕ್ಸಾನಾ**:— ( ಉಕ್ಕಿ ಬರುವ ದುಃಖವನ್ನು ತಡೆಯುತ್ತ ) ದೇವರು ನಿನ್ನನ್ನು ರಕ್ಷಿಸಲಿ !

**ಪ್ರಾರ್ಥನಾ**:— ದೇವರು ನಮ್ಮ ದೇಶವನ್ನು ರಕ್ಷಣೆ ಮಾಡಲಿ !

**ರುಕ್ಸಾನಾ**:— (ಬಿಂಕದ ನುಡಿಯಲ್ಲಿ) ಪ್ರಾರ್ಥನಾ ! ಅಣ್ಣನಿಗಾಗಿ ಅಣ್ಣನ ಆಯುರಾರೋಗ್ಯ ಕೇಳಿಕೊ.

**ಪ್ರಾರ್ಥನಾ**:— ರಾಷ್ಟ್ರದ ಮುಂದೆ ರಾಜಾ ಒಂದು ತೃಣಸಮಾನ. ರಾಷ್ಟ್ರ ಉಳಿದರೆ ರಾಜನಿಗೆಲ್ಲವೂ ಸಿಗುವದು. ರಾಷ್ಟ್ರಸೋತರೆ ರಾಜ ದಾಸನಾಗುವನು.

(ನೌಕರನು ಮಹಾರಾಜನಿಗೆ ಉಕ್ಕಿನ ಶಿರಸ್ತ್ರಾಣ ಕೊಡುವನು. ಸಮರ ನಗುವನು. )

**ಪುರು**:— ( ಶಿರಸ್ತ್ರಾಣವನ್ನು ತಲೆಗೆಹಾಕಿಕೊಳ್ಳುತ್ತ ) ನಾನು ಪ್ರಾರ್ಥನಾಳ ಮಾತಿಗೆ ಮರ್ಯಾದೆ ಕೊಡುವೆನು. (ಘಟ್ಟಿಯಾಗಿ ನಗುತ್ತ) ನನ್ನ ತಂಗಿಗೆ ನನ್ನ ಮೇಲಿನ ಪ್ರೀತಿಯು ಹೇಡಿಯನ್ನಾಗಿ ಮಾಡು



ತ್ತಿದೆ. (ಕಾಲು ನೌಕರನಕಡೆಗೆ ಮಾಡುವನು ... ಉಕ್ಕಿನ ಪಟ್ಟಿ ಕಟ್ಟುವನು.) ಪ್ರಾರ್ಥನಾ ! ನಾನು ಯುದ್ಧಕ್ಕೆ ಹೊರಡುವೆನು, ಆ ಯುದ್ಧದಲ್ಲಿ ಎಲ್ಲವೂ ಆಗುವದು. ಅದೇನೆಂದರೆ— ನಾವು ಸೂರ್ಯಾಸ್ತದೊಳಗಾಗಿ ಗೆದ್ದು "ಜಯಭೇರಿ" ಬಾರಿಸುತ್ತಲೂ ಬರಬಹುದು. ಅಥವಾ ಚಂದ್ರನು ನನ್ನನ್ನು ನೋಡಿದೆ. ನನ್ನ ಮೃತ ದೇಹವನ್ನು ನೋಡಲೂಬಹುದು. ಆದ್ದರಿಂದ ನಿನ್ನ ಯಾವದಾದರೂ ಬೇಡಿಕೆ ಇದ್ದರೆ ಹೇಳು. ನಾನದನ್ನು ಪೂರೈಸಿ ಕೊಡುವೆನು.

**ಪ್ರಾರ್ಥನಾ:—** ನನ್ನ ಬೇಡಿಕೆ ಹೀಗಿರುವದು, ದೇಶದ ಶತ್ರುಗಳು ಯಾರೇ ಇರಲಿ, ಅವರು ಹಾಳಾಗಬೇಕು.

**ಪುರು:—** ನನ್ನ ರಕ್ತದ ಕೊನೆಯ ಹನಿಯಿರುವವರೆಗೂ ಹೋರಾಡುವೆನು. (ರುಕ್ಸಾನಳ ಕಡೆಗೆ ತಿರುಗಿ) ತಂಗೀ ಈಗ ನಿನಗೇನುಬೇಕು?

**ರುಕ್ಸಾನಾ:—** ನಾನಿಲ್ಲಿಗೆ ಬಂದ ಉದ್ದೇಶ ಪೂರೈಸಬೇಕು.

**ಪುರು:—** ಅಂದರೆ; ಸಿಕಂದರ ಗೆದೆಯಬೇಕು!

(ಪ್ರಾರ್ಥನಾ ಆಶ್ಚರ್ಯದಿಂದ ನೋಡುವಳು.)

**ರುಕ್ಸಾನಾ:—** ಅಲ್ಲ,! ಸಿಕಂದರ ಜೀವದಿಂದುಳಿಯಬೇಕು.

(ಪ್ರಾರ್ಥನಾ ಗಾಬರಿಯಾಗುವಳು.)

**ಪುರು:—** ಸಿಕಂದರನು ನನ್ನ ಕೈಯಿಂದ ಸಾಯಲಾರನು. ಎಂದು ವಚನ ಕೊಡುವೆನು.

**ಪ್ರಾರ್ಥನಾ:—** ಯಾಕೆ ಸಾಯುವದಿಲ್ಲ ? ಅವನು ನಮ್ಮ ದೇಶದ ಮೇಲೆ ದಾಳಿ ಮಾಡಿದ್ದಾನೆ. ಎರಡು ಸಾವಿರ ಸೈನಿಕರನ್ನು ಕೊಂದಿದ್ದಾನೆ ಅಮರನನ್ನೂ ಕೊಂದಿದ್ದಾನೆ. ಇಂಥವನಿಗೆ ಶರಣು ಮಾಡಬೇಕೆಂದೆನಿಸುವುದೇನು ? ಇಲ್ಲ ಅವನು ನಮ್ಮ ಮತ್ತು ನಮ್ಮ ದೇಶದ ವೈರಿ ಇದ್ದಾನೆ.

**ಸಮರ:—** (ಮುಂದೆ ಬಂದು) ಏನು, ಬೇಗಂಸಾಹೇಬರೇ! ಉಂಡಮನಿಗಳಾ ಎಣಿಸ ತೊಡಗಿದಿರಲ್ಲ. ಇದಕ್ಕಾಗಿ ಇಲ್ಲಿಗೆ ಬಂದಿರೇನು ?

**ಪುರು**:— ಸಮರ ! ನೀನು ನಿನ್ನ ಮೇರೆಬಿಟ್ಟು ಹೋಗಿರುವಿ. ಕ್ಷಮಾ ಕೇಳಿಕೊ !

**ಸಮರ**:— ( ನಮ್ರತೆಯಿಂದ ) ಮಹಾರಾಜರು ಕ್ಷಮಿಸಬೇಕು..... ಆದರೆ ( ಉಕ್ಕಿಬರುವ ಸಿಟ್ಟನ್ನು ತಡೆಯಲು ಪ್ರಯತ್ನಿಸುತ್ತ ) ಅಮರನನ್ನು ಯಾರು ಕೊಂದಿರುವರೋ, ಅವರು ನಮ್ಮನ್ನು ತಮ್ಮ ದಾಸರನ್ನಾಗಿ ಮಾಡಿಕೊಳ್ಳಬೇಕೆನ್ನುವರು. ಅವರ ಕಣ್ಣು ನಮ್ಮ ಮರ್ಯಾದೆಯ ಮೇಲಿದೆ ಐಶ್ವರ್ಯದ ಮೇಲಿದೆ. ಶಾಂತಿಯ ಮೇಲಿದೆ. ಇಂಥ ಮಹಾ ಕಳ್ಳನನ್ನು ಯಾಕೆ ಕೊಲ್ಲಬಾರದು ? ಅವನನ್ನು ನೀವೇಕೆ ಕೊಲ್ಲುವದಿಲ್ಲ ?

**ಪುರು**:— ( ಕಪಾಟಿನಿಂದ ರಕ್ಷಾ ತೆಗೆದು ತೋರಿಸುತ್ತ ) ಇದನ್ನು ರುಕ್ಸಾನಳಿಂದ ಕಟ್ಟಿಸಿಕೊಂಡಿದ್ದೇನೆ. ಈಗಾಕೆ ನಮ್ಮ ತಂಗಿಯಾಗಿದ್ದಾಳೆ. ಸಿಕಂದರ ಸತ್ತರೆ, ತಂಗಿ ವಿಧವೆಯಾಗುವಳು ( ರಕ್ಷಾ ಕಪಾಟಿನಲ್ಲಿಟ್ಟು ಕಪಾಟು ಮುಚ್ಚುವನು. ) ಈ ರಕ್ಷೆಯನ್ನು ರುಕ್ಸಾನಳು ಪುರುರಾಜನಿಗೆ ಕಟ್ಟಿದ್ದಾಳೆ. ಆದರೆ ಆಲೋಚಿಸಿನೋಡು ಇರಾಣವು ಹಿಂದುಸ್ಥಾನಕ್ಕೆ ಕಟ್ಟಿದೆ. (ಅತ್ತಿತ್ತ ಅಡ್ಡಾಡುತ್ತ) ಈಗ, ಹಿಂದುಸ್ಥಾನವು ಇರಾಣಕ್ಕೆ ಸಹಾಯ ಮಾಡುವದು ಶಕ್ಯವಿಲ್ಲ. ಯಾಕಂದರೆ ಇರಾಣವು ಶತೃಸ್ಥಾನದಲ್ಲಿದೆ. ಆದರೆ ಇರಾಣದ ಒಬ್ಬ ಮಗಳಿಗೆ ಸಹಾಯ ಮಾಡಲು ಶಕ್ಯವಿದೆ.— ಯಾಕಂದರೆ ಆಕೆಗೆ ನಾವು ಸೋಲುವದು ಬೇಕಾಗಿಲ್ಲ. ನಮ್ಮ ಸೋಲು ಗೆಲವುಗಳು ಆಕೆಗೆ ಸಂಬಂಧವಿಲ್ಲ. ಆಕೆಗೆ ಬೇಕಾದದ್ದು ತನ್ನ ಸೌಭಾಗ್ಯದ ಸುಖಕ್ಕಾಗಿ, ಒಬ್ಬ ವ್ಯಕ್ತಿಯ ಜೀವದಾನ. ತಂಗಿಯ ಇಂಥ ಮಹಾ ಸುಖವನ್ನು ಪೂರೈಸಿ ಕೊಡುವದು ಅಣ್ಣನ ಪ್ರಥಮ ಕರ್ತವ್ಯ ಇದನ್ನು ಯಾವನು ಮಾಡುವದಿಲ್ಲವೋ, ಅವನು ಮನುಷ್ಯನಲ್ಲ, ಮನುಷ್ಯರೂಪದ ಪಶು !

**ಸಮರ**:— ಇದರಿಂದ ನಾವು ಸೋಲನ್ನು ಕೈಮಾಡಿ ಕರೆದಂತಾಗುವದು. ಯಾಕಂದರೆ ಸಿಕಂದರನ ಸೈನ್ಯ, ಅಂಭಿರಾಜನ ಸೈನ್ಯ ಎರಡೂ ಕೂಡಿದರೆ ನಮ್ಮ ಸೈನ್ಯದ ಐದುಪಟ್ಟು ಆಗುವದು. ಇಷ್ಟು ದೊಡ್ಡ

ಸೈನ್ಯವನ್ನು ಗೆದೆಯುವದು ನಮ್ಮ ಸೈನಿಕರಿಗೆ ಅಸಾಧ್ಯ. ನಾವು ಯುದ್ಧದಲ್ಲಿ ಗೆದೆಯಬೇಕಾದರೆ ಸಿಕಂದರನು ಸಾಯಬೇಕು. ಆಗ ನಾಯಕನನ್ನು ಕಳಕೊಂಡ ಸೈನಿಕರು, ರಣಭೂಮಿಯಿಂದ ಕಾಲ್ದೆಗೆಯುವರು. ಆಗ ನಮಗೆ ಜಯ ದೊರೆಯುವದು. ಸಿಕಂದರನು ಬದುಕಿ ಉಳಿದರೆ ನಮಗೆ ಸೋಲು ನಿಶ್ಚಯ,

**ಪುರು:**— ಸಮರ! ನೀನನ್ನುವದೂ ನಿಜ, ಆದರೆ ನಿರ್ಣಯ ಕೊಡುವವನು ದೇವರು. ದೇವರ ಮೇಲೆಯೂ ನಮ್ಮ ಮತ್ತು ನಮ್ಮ ಸೈನಿಕರ ಬಾಹು ಬಲದ ಮೇಲೆಯೂ ಭಕ್ತಿಯನ್ನಿಟ್ಟು ಮುನ್ನುಗ್ಗೋಣ. ಬೇರೆ ವಿಚಾರಗಳನ್ನೇನನ್ನೂ ಮಾಡುವದು ಬೇಡ.

**ಪ್ರಾರ್ಥನಾ:**— ಅಂದರೆ ಇದರರ್ಥ,— ಬುದ್ಧಿಪೂರ್ವಕವಾಗಿ ನೀವು ದೇಶವನ್ನು ಸೋಲಿಗೀಡುಮಾಡುವಿರೇನು?

**ಪುರು:**— ಯಾವನು ತನ್ನ ದೇಶವನ್ನು ಸೋಲಿಗೀಡುಮಾಡುವನೋ ಅವನು ಪಶುಗಿಂತಲೂ ಕಡೆ.

( ಶರಿತಾ ರಾಣಿ ಬರುವಳು )

**ಪುರು:**— ( ಶರಿತಾ ರಾಣಿಯ ಮುಂದೆ ಹೋಗಿ ನಿಂತು ) ಪ್ರಾರ್ಥನಾ ಕೇಳುವಳು,— ನಮ್ಮ ದೇಶ ನಮಗುಳಿಯಲೆಂದು. ನಾನಾಕೆಗೆ ವಚನ ಕೊಟ್ಟಿರುವೆನು, ನಮ್ಮ ರಕ್ತದ ಕೊನೆಯ ಹನಿ ಇರುವವರೆಗೂ ಹೋರಾಡುವೆವು. ರುಕ್ಸಾನಾ ಕೇಳುವಳು, ನಾನು ಸಿಕಂದರನನ್ನು ಕೊಲ್ಲಬಾರದೆಂದು. ನಾನು ಆಕೆಗೂ ವಚನ ಕೊಟ್ಟಿರುವೆನು, ಸಿಕಂದರನು ನನ್ನ ಕೈಯಿಂದ ಸಾಯಲಾರನು. ಈಗ ನೀನು ಹೇಳು! ನಿನಗೇನುಬೇಕು?

**ಶರಿತಾ:**— ನನಗೂ ಬೇಕು, ನನಗೆ ಬೇಕಾದುದನ್ನು ಜಗತ್ತಿನ ಯಾವ ಮನುಷ್ಯನೂ ತಂದು ಕೊಡಲಾರನು. ( ಕಣ್ಣಲ್ಲಿ ದುಃಖಾಶ್ರುಗಳು ಬರುವವು. )

**ಪುರು:**— ಶರಿತಾರಾಣೀ! ಎಚ್ಚರಾಗು, ಇಂದು ಯುದ್ಧವಿದೆ.

**ಶರಿತಾ:** — ( ದುಃಖಿಸುತ್ತ ) ನನ್ನ ಮಗನಂತೂ, ತನ್ನ ವಿಶ್ವ ಮತ್ತು ವಿಜಯಗಳೆರಡನ್ನೂ ಬಿಟ್ಟು ಹೋಗಿರುವನು. ಈಗ ನಿಮ್ಮನ್ನಾ

ದರೂ ನೀವು ಉಳಿಸಿ ಕೊಡಿರಿ.

( ಒಮ್ಮೆಲೇ ನಗಾರಿಯ ಶಬ್ದ ಬರುವದು. ಪುರುರಾಜನು ಅವಸರ ದಿಂದ ಹೊರಗೆ ಬರುವನು. ಅವನ ಬೆನ್ನುಗೂಡ ಸಮರನೂ ಬರುವನು )

**ಶರಿತಾ:**— ರುಕ್ಸಾನಾ! ನೀನು ಶೀವ್ರ ಹೋಗಿ ನಿಮ್ಮಣ್ಣನ ಹಣೆಗೆ ತಿಲ ಕದ ಬಟ್ಟಿಟ್ಟುಬಾ.

( ರುಕ್ಸಾನಳು ಆರುತಿಯ ತಾಟನ್ನೂ, ಹೂವಿನ ಹಾರವನ್ನೂ, ತೆಗೆದುಕೊಂಡು ಶೀವ್ರವಾಗಿ ನಡೆಯುತ್ತಿರುವಾಗ ಕಾಲುಜಾರಿ ಬೀಳು ವಳು. ಶರಿತಾ ರಾಣಿಯು ಆಕೆಯನ್ನು ಎಬ್ಬಿಸುವಳು. ಮತ್ತು ಬೇಸರ ಗೊಂಡು ಕೂತುಕೊಳ್ಳುವಳು. ಪಡದೆ ಬೀಳುವದು. )

—O—

## ದೃಶ್ಯ ೪

**ಸ್ಥಳ:**— ಯುದ್ಧ ಭೂಮಿ. **ವೇಳೆ:**— ಸೂರ್ಯೋದಯ.

( ರಣವಾದ್ಯಗಳ ಶಬ್ದ ಕೇಳಿ ಬರುವದು. ಹಿಂದುಸ್ಥಾನದ ಸಿಪಾ ಯಿಗಳು ಕೈಯಲ್ಲಿ ಕಠಾರಿಗಳನ್ನು ಹಿಡಿದುಕೊಂಡು ಸಾಲಾಗಿ ನಿಂತಿರು ವರು. ಅವರಲ್ಲಿ ಸಮರನೂ ಇರುವನು. ರಂಗಭೂಮಿಯು ಸೈನಿಕರಿಂದ ತುಂಬಿ ಹೋಗಿದೆ. ಅಷ್ಟರಲ್ಲಿ ಪುರುರಾಜನು ಇಬ್ಬರು ಸೈನಿಕರೊಡನೆ ಬರುವನು. ಒಂದು ಎತ್ತರವಾದ ಸ್ಥಳದಲ್ಲಿ ನಿಂತು ಈ ಪ್ರಕಾರ ಸೈನಿಕರಿಗೆ ಸಂದೇಶ ಹೇಳುವನು.)

**ಪುರು:**—.ಬೆಂಕಿ ಮತ್ತು ಬಿರುಗಾಳಿಗಳಂತಿರುವ ಪ್ರಚಂಡ ಶಕ್ತಿಯ ಪುತ್ರರೇ ನೀವು ಸಾಮಾನ್ಯ ವಂಶಜರಲ್ಲ. ನಿಮ್ಮ ಹಿರಿಯರು ಯುದ್ಧ ಭೂಮಿಯಲ್ಲಿ ,ನೂಡಿ ವೀರ ಸ್ವರ್ಗ ಹೊಂದಲು ಕಲಿತಿದ್ದರೇ ಹೊರ್ತು, ಓಡಿ ಹೋಗಲು ಕಲಿತಿದ್ದಿಲ್ಲ. ಅವರು ತಮ್ಮ ಮಾನ ಮರ್ಯಾದೆಗಳಿಗೆ ಆಧಾರವಾದ ಈ ಪತಾಕೆಯನ್ನು ( ನಿಲ್ಲಿಸಿದ ಧ್ವಜದಕಡೆಗೆ ಕೈ ಮಾಡಿ) ಉಳಿಸಿಕೊಳ್ಳಲು ತಮ್ಮ ಸರ್ವಸ್ವವನ್ನೂ ಸೂರೆಗೊಳ್ಳುತ್ತಿದ್ದರು. ಅವರ ಆ ಪ್ರಭಾವದ ಮೂಲಕ ಯಾವ ವಿದೇಶಿಯನೂ, ಈ ನಿಮ್ಮ ಮಾತೃಭೂಮಿಯ

ಮೇಲೆ ಈ ವರೆಗೂ ಕಾಲಿಟ್ಟಿರಲಿಲ್ಲ. ಆದರಿಂದು ಒಬ್ಬ ಮಧೋನ್ಮತ್ತ ವಿದೇಶಿ ರಾಜನು ಬಂದಿರುವನು. ಅವನು ಈ ಧ್ವಜವನ್ನು ತಗೆದೊಗೆಯಿರಿ, ನನಗೆ ಶರಣು ಹೊಡೆದು ಬಗ್ಗಿ ನಿಲ್ಲಿರಿ. ಇಲ್ಲವಾದರೆ ನಿಮ್ಮ ಸರ್ವಸ್ವವನ್ನೂ ಸೂರೆಗೊಂಡು, ನಿಮ್ಮನ್ನೂ ಸವರಿ ಹಾಕುವೆನು, ಎಂದು ಅನ್ನುತ್ತಿರುವನು. ಅವನ ಆ ಮಾತಿಗೆ ಒಪ್ಪಿಕೊಳ್ಳುವಿರಾ ?

**ಸೈನಿಕರು:**— ( ಒಂದೇ ಸ್ವರದಿಂದ) ಸಾಧ್ಯವಿಲ್ಲ! ಎಂದಿಗೂ ಸಾಧ್ಯವಿಲ್ಲ.

**ಪುರು:** — ಆದರೀಗ, ನಿಮ್ಮ ಮತ್ತು ನಿಮ್ಮ ದೇಶದ ಮರ್ಯಾದೆಯನ್ನು ಉಳಿಸಿಕೊಳ್ಳಬೇಕೆನ್ನುವಿರೇನು ? ಹಾಗಾದರೆ; ನಿಮ್ಮ ಸಂಪೂರ್ಣ ಶಕ್ತಿಯೊಡನೆ ಮುನ್ನುಗ್ಗಿರಿ. ವೈರಿಯ ಬಾಯಿ ಬಂದುಮಾಡಿರಿ. ಮತ್ತು ನೀವು ನಿಮ್ಮ ಜಾತಿಗಾಗಿ ಬದುಕಿ ಬಾಳಿಲ್ಲ! ದೇಶಕ್ಕಾಗಿ ಬದುಕಿದ್ದೇವೆ! ದೇಶ ಉಳಿಸಿಕೊಳ್ಳಲು ಪ್ರಾಣಕೊಡಲು ಸಹ ಸಿದ್ಧರಿದ್ದೇವೆ! ಎಂಬುದನ್ನು ಜಗತ್ತಿಗೆ ಖಾತ್ರಿ ಮಾಡಿಕೊಡಿರಿ. ಆಗ ನಿಮ್ಮ ಹಿರಿಯರೂ, ಹುತಾತ್ಮರೂ ನಿಮಗೆ ಆಶೀರ್ವದಿಸುವರು.

**ಸೈನಿಕರು:**— ( ಜೋರಿನಿಂದ ) ಹರಹರ ಮಹಾದೇವ !

—†—

## ದೃಶ್ಯ ೫

**ಸ್ಥಳ:- -ಯುದ್ಧ ಭೂಮಿಯ ಮತ್ತೊಂದು ಭಾಗ**
**ವೇಳೆ:— ಪ್ರಾತಃಕ್ಕಾಲ**

(ಸಿಕಂದರನು ತನ್ನ ಸೈನ್ಯದ ಎದುರಿನಲ್ಲಿ ನಿಂತು, ಆವೇಶ ಪೂರ್ಣ ಧ್ವನಿಯಲ್ಲಿ ಮಾತಾಡುತ್ತಿರುವನು. )

**ಸಿಕಂದರ:**— ಯುದ್ಧ ಭೂಮಿಯ ಶುದ್ಧ ಶೂರರೆ ! ನಿಸರ್ಗವು ನಿಮ್ಮ ಸತ್ವ ಪರಿಕ್ಷೆಯನ್ನು ಮತ್ತೊಮ್ಮೆ ಮಾಡಬೇಕೆಂದೆನಿಸುತ್ತದೆ. ಪ್ರಭುತ್ವವು ಶೂರತ್ವವನ್ನು ಸೋಸಿ ನೋಡಬೆಕೆನ್ನುವದು. ಆದ್ದರಿಂದ ಹೃದಯದಲ್ಲಿ ಹುರುಪು ಹುಮ್ಮಸಗಳನ್ನೂ, ಮೆದುಳಿನಲ್ಲಿ ಮಧೋನ್ಮ

ತ್ತತೆಯನ್ನೂ, ನುಡಿಯಲ್ಲಿ ದೇವರ ನಾಮಸ್ಮರಣೆಯನ್ನೂ, ತುಂಬಿ ತುಳುಕಿಸುತ್ತ ಮುನ್ನುಗ್ಗಿರಿ. ಜಗತ್ತಿನ ಮಹಾದಿನಗಳ ಮಾಲಿಕೆಯಲ್ಲಿ ಇಂದಿನ ಈ ದಿನವನ್ನು ಬರೆಯಿರಿ. ಜಗತ್ತಿನ ಶಕ್ತಿಸಾಮರ್ಥ್ಯಗಳು ನಿಮ್ಮ ಕಾಲಿಗೆ ಬಂದು ಬೀಳುವಂತೆ ಮಾಡಿರಿ. ಸ್ವರ್ಗಾಧಿಪತಿಯೂ ಭೂಲೋಕದ ಚಕ್ರಾಧಿಪತಿಯ ಮಗನೂ, ನಿಮ್ಮ ಸಹಾಯಕ್ಕಾಗಿ ಸದಾ ಸಿದ್ಧರಿರುವರು.

**ಸೈನಿಕರುಃ**—( ಜೋರಿನಿಂದ )ಅಲೆಕ್ಝಾಂಡರ ಜಿಂದಾಬಾದ! ಅಲೆಕ್ಝಾಂಡರ ಜಿಂದಾಬಾದ !!

**ಸಿಕಂದರಃ**— ನೀವು ಇದನ್ನೂ ವಿಚಾರ ಮಾಡಿರಿ. – ನಿಮ್ಮ ದೇಶವು ನಿಮ್ಮಿಂದ ಎಷ್ಟು ದೂರವಿರದು, ಇಲ್ಲಿಂದ ಸೋತು ನಿಮ್ಮ ದೇಶಕ್ಕೆ ಹಿಂತಿರುಗಿದರೆ, ದಾರಿಯಲ್ಲಿಯ ಕಲ್ಲು ಮಣ್ಣುಗಳು ಸಹ ನಿಮ್ಮ ಕಾಲನ್ನು ಹಿಡಿದು ಕೊಳ್ಳುವವು. ಒಂದು ವೇಳೆ ಅದರಲ್ಲಿಯೂ ಬದುಕಿಕೊಂಡು ದೇಶಕ್ಕೆ ಹೋದರೆ, ಇರಾಣವು ಅವರನ್ನು ನಾಚಿಗ್ಗೇಡಿಯೆಂದು ಕರೆಯುವದು. ಆಗವರು ಕೊನೆಯವರೆಗೂ ನಾಚಿಗ್ಗೇಡಿಯಾಗಿಯೇ ಸಾಯಬೇಕಾಗುತ್ತದೆ. ಕಾರಣ, ಮುನ್ನುಗ್ಗುವದರಲ್ಲಿ ಮರ್ಯಾದೆ ಇದೆ. ಹಿಂದಿರುಗುವದರಲ್ಲಿ ಮರಣವಿದೆ. ಹೇಳಿರೀಗ! ನಿಮಗೆ ಮರ್ಯಾದೆ ಬೇಕೋ ? ಮರಣ ಬೇಕೋ ?

**ಶಿಪಾಯಿಗಳುಃ**— ( ಜೋರಿನಿಂದ ) ನಮಗೆ ಮರ್ಯಾದೆಬೇಕು !

**ಸಿಕಂದರಃ**— (ನಕ್ಕು ) ಮರ್ಯಾದೆಯು ಸುಮ್ಮನೇ ಸಿಗದು. ಮುನ್ನುಗ್ಗಬೇಕು. ಮುನ್ನುಗ್ಗಿ ಈ ಯುದ್ಧ ಗೆದೆಯಬೇಕು, ಆಗ ನಿಮ್ಮ ಸುಖ ಸಂತೋಷಗಳು ನಿಮಗಾಗಿ ಕಾದು ನಿಲ್ಲುವವು.

**ಸೈನಿಕರುಃ**— ನಾವು ಮುನ್ನುಗ್ಗುವೆವು! ಯುದ್ಧ ಗೆದೆಯುವೆವು!

( ರಂಗ ಭೂಮಿಯಮೇಲೆ ಕತ್ತಲೆಯಾಗುವದು. ರಣವಾದ್ಯಗಳ ಶಬ್ದ ಕೇಳಿ ಬರುವದು. ಯುದ್ಧ ಸುರುವಾಗುವದು. ಯುದ್ಧ ಭೂಮಿಯ ಸುದ್ದಿಗಾರನು ಯುದ್ಧದ ಸಮಾಚಾರ ಹೇಳ ತೊಡಗುವನು.)

**ಸುದ್ದಿಗಾರಃ**— ( ರಂಗ ಭೂಮಿಯಮೇಲೆ ಕತ್ತಲೆ ಇರುವದು. ) ಪುರು ಮಹಾರಾಜರೂ ಅವರ ಸೈನಿಕರೂ ಮುನ್ನುಗ್ಗುತ್ತಿರುವರು. ಸಿಕಂ

ದರನ ಸೈನ್ಯ ಹಿಂದೆ ಸರಿಯುತ್ತಿದೆ. ಈಗ ಇಬ್ಬದಿಯ ಸೈನ್ಯಗಳು ಎದುರು ಬದುರು ನಿಂತಿರುವವು. ಪುರುರಾಜರ ಸೈನ್ಯ ಮುಂದೆ ಮುಂದೆ ಮುನ್ನುಗ್ಗ ತೊಡಗಿತು. ಯುನಾನದ ಸೈನ್ಯವು ನಿಂತಲ್ಲೇ ನಿಂತಿದೆ. ಪುರುರಾಜರ ಸೈನ್ಯ ಇರಾಣದ ಸೈನ್ಯವನ್ನು ಸಮೀಪಿಸಿತು. ಇರಾಣದ ಸೈನ್ಯ ಹೆದರಿ, ನಿಧಾನವಾಗಿ ಹಿಂದೆ ಸರಿಯುತ್ತಿದೆ. ಭಾರತದ ಸೈನ್ಯ ಒಂದೇ ಸವನೆ ಮುನ್ನುಗ್ಗುತ್ತಲಿದೆ ಈಗ ಇರಾಣದ ಸೈನ್ಯದಲ್ಲಿ ಘುಮುಕಿತು. ಇರಾಣದ ನಾಲ್ಕಾರು ಸೈನಿಕರು ಸತ್ತರು. ಕೈಗೆ ಕೈ ಕಾಳಗ ನಡೆಯುತ್ತಿದೆ ಎರಡು ಕಡೆಯವರು ಸಾಯುತ್ತಿರುವರು.(ಘಾಯಗೊಂಡ ಸೈನಿಕರು ಒದರುವ ಧ್ವನಿ ಕೇಳಬರುವದು. ) ಪುರುರಾಜನ ಸೈನ್ಯ ಮುಂದೆ ಮುಂದೆ ಹೋಗುತ್ತಿದೆ.... .......ಇದೇನಾಯಿತು! ........ಇದೇನಾಯಿತು!.... ....... ಪುರುರಾಜರ ಆನೆ ಬಿದ್ದಿತು. ಸಮರ ಮತ್ತು ಸೇನಾಪತಿಗಳು ಕಾಣುವದಿಲ್ಲ. ಪುರುರಾಜರ ಸುತ್ತು ವೈರಿಗಳಿರುವರು ಅವರಿಗೆ ದೇವರು ಸಹಾಯ ಮಾಡಬೇಕು.

ಭಾರತ ಸೈನಿಕರು ಪುರುರಾಜರ ಕಡೆಗೆ ಮುನ್ನುಗ್ಗುತ್ತಲಿರುವರು. ತಮ್ಮ ರಾಜನ ರಕ್ಷಣೆಗಾಗಿ ತಮ್ಮ ಜೀವದ ಹಂಗುದೊರೆದು, ಆವೇಶಗೊಂಡು ವೈರಿಗಳನ್ನು ಕತ್ತರಿಸುತ್ತ ವೇಗವಾಗಿ ಮುನ್ನುಗ್ಗುತ್ತಲಿರುವರು. ಬಂದರು ಸಮೀಪಕ್ಕೆ ಬಂದರು. ಹಾಂ.... ಹಾಂ.... ಕೂಡಿಕೊಂಡೇ ಬಿಟ್ಟರು. ಈಗ ಪುರು ಮಹಾರಾಜರಿಗೆ ಯಾವ ಅಪಾಯವೂ ಇಲ್ಲ.

ಭಾರತ ಸೈನ್ಯವು ಪುನಃ ಮುನ್ನುಗ್ಗುತ್ತಲಿದೆ. ವೈರಿ ಸೈನ್ಯವು ಹೆದರಿ ಹಿಂದೆ ಸರಿಯುತ್ತಲಿದೆ. ತಮ್ಮ ಎರಡು ಪಟ್ಟು ಇರುವ ವೈರಿ ಸೈನ್ಯ ಸೋಲಿಸುವದೇನು ಕಠಿಣ ಕೆಲಸವಲ್ಲ. ಎಂದು ತಿಳಿದ ಭಾರತದ ಸೈನ್ಯವು ಧೈರ್ಯದಿಂದ ಮುನ್ನುಗ್ಗುತ್ತಲಿದೆ. ಅವರ ಸಂಕಲ್ಪ ಈಡೇರುವ ಲಕ್ಷಣಗಳೂ ಕಂಡು ಬರುವವು. ಇನ್ನೇನು ವಿಜಯ ನಮ್ಮದೇ ಎಂದು ತಿಳಿದಿರುವರು.

ಇದೇನಾಶ್ಚರ್ಯ ! ಬಲಭಾಗದಿಂದ ಮತ್ತೊಂದು ಮಹಾ ಸೈನ್ಯ ಬರುತ್ತಿದೆ. ಅದು ಸಿಕಂದರನ ಸೈನ್ಯವಿರಬಹುದೆ ? ಹೌದು, ಅದು, ಸಿಕಂದರನ ಸೈನ್ಯವೇ ಹೌದು.

(ಅಲೆಕ್ಝಾಂಡರ ಜಿಂದಾಬಾದ! ಅಲೆಕ್ಝಾಂಡರ ಜಿಂದಾಬಾದ!! ಎಂಬ ಧ್ವನಿಯು ಕೇಳಿ ಬರುವದು) ಸೂರ್ಯಾಸ್ತವು ಸಮೀಪಿಸಿತು ಇನ್ನು ಭಾರತ ಸೈನ್ಯ ಗೆದೆಯುವ ಆಶೆಯಿಲ್ಲ. ಸಿಕಂದರನು ತನ್ನ ಕುದುರೆಯನ್ನು ಪುರುರಾಜನತ್ತ ಧುಮುಕಿಸಿದನು ಮಹಾರಾಜನ ಆನೆಯಮೇಲೆ ತನ್ನ ಕುದುರೆಯ ಮುಂಗಾಲನ್ನಿಡಿಸಿದನು, ಆಗ ಮಹಾರಾಜನು ಕೈಯಲ್ಲಿಯ ಭಾಲೆಯಿಂದ ಕುದುರೆಗೆ ಜೋರಾಗಿ ಹೊಡೆಯಲು ಆ ಕುದುರೆಯು ಕೂಡಲೆ ಸತ್ತು ನೆಲಕ್ಕುರುಳಿತು. ಸಿಕಂದರನು ಭೂಮಿಗೆ ಬಿದ್ದನು. ಕೈಯಲ್ಲಿಯ ಕಠಾರಿ ಎಲ್ಲಿಯೋ ಬಿದ್ದು ಹೋಯಿತು ಈಗ ಅವನ ಕೈಯಲ್ಲಿ ಶಸ್ತ್ರ ವಿಲ್ಲ, ಕುದುರೆ ಇಲ್ಲ, ಅವನ ಹತ್ತರ ಅವನ ಸೈನಿಕರಿಲ್ಲ ಮಹಾರಾಜನು ಆನೆಯಿಂದ ಸ್ವತಃ ಕೆಳಗೆ ಜಗಿದನು. ಕೈಯಲ್ಲಿ ಭಾಲೆಯನ್ನು ತೆಗೆದುಕೊಂಡು ಸ್ವತಃ ಸಿಕಂದರನ ಮೇಲೆ ಬಿದ್ದನು. ಸಿಕಂದರನು ಭೂಮಿಯಮೇಲೆ ಅಂಗಾತ ಬಿದ್ದಿರುವನು. ಪುರುರಾಜನು ಸಿಕಂದರನ ಎದೆಗೆ ಬಾಲೆ ಒಗೆಯಬೇಕೆಂದು, ಬಾಲೆಯನ್ನೆತ್ತಿ ಸಿಕಂದರನ ಎದೆಗೆ ಗುರಿ ಇಟ್ಟನು. ಇನ್ನೇನು ಸಿಕಂದರನು ಸತ್ತು ಹೋಗುವನು ಎಂದು ಅನಿಸಿತ್ತು. ಆದರೆ ಮಹಾರಾಜರ ಗುರಿಯಿಟ್ಟ ಬಾಲೆ ಆಕಾಶದಲ್ಲಿ ಅಲ್ಲಿಯೇ ನಿಂತು ಬಿಟ್ಟಿತು. ಮಹಾರಾಜರು ಸಿಕಂದರನನ್ನು ನೆಟ್ಟದೃಷ್ಟಿ ಯಿಂದ ನೋಡುತ್ತಿರುವರು. ಅವರ ಆ ಸ್ಥಿತಿಯನ್ನು ನೋಡಿದರೆ, ಯಾವದೇ ಒಂದು ವಿಷಯ ಅವರ ನೆನಪಿಗೆ ಬಂದು, ಆ ವಿಷಯದ ವಿಚಾರದಲ್ಲಿ ಮಗ್ನರಾದಂತೆ ಕಂಡು ಬರುತ್ತಿತ್ತು. ಆದರೆ ದೇವರಿಗೆ ಗೊತ್ತು ಅಂತಹ ಯಾವ ವಿಚಾರ ಅವರ ತಲೆಯಲ್ಲಿಬಂದು ಕೈಯಲ್ಲಿ ಸಿಕ್ಕ ವೈರಿಯನ್ನು ಕೊಲ್ಲದೆ ಬಿಟ್ಟಿರಬಹುದು? ಹಾಂ ... ಈಗ ತಿಳಿಯಿತು ಯುದ್ಧದಲ್ಲಿ ಸಿಕಂದರನನ್ನು ಕೊಲ್ಲುವದಿಲ್ಲೆಂದು, ರುಕ್ಸಾನಳಿಗೆ ಕೊಟ್ಟ ವಚನ ನೆನಪಿಗೆ ಬಂದಿರಬಹುದು. ಮಹಾರಾಜರು ಸ್ತಬ್ಧರಾಗಿ ನಿಂತುಬಿಟ್ಟಿರುವರು. ಆ ವೇಳೆಯನ್ನು ಸಾಧಿಸಿ, ಸಿಕಂದರನು ಚಟ್ಟನೇ ಎದ್ದು, ಮತ್ತೊಂದು ಕುದುರೆಯಮೇಲೆ ಜಗಿದು ಕೂತು ಬಿಟ್ಟನು. ಅಂತು ಸಿಕಂದರ ಬದುಕುಳಿದನು.

ಕತ್ತಲಾಗಿದೆ, ಯಾವವೂ ಸ್ಪಷ್ಟವಾಗಿ ಕಾಣುವದಿಲ್ಲ. ಮಹಾರಾಜರ ಆನೆಗಳು ಒದರುತ್ತ ಓಡುತ್ತಲಿವೆ. ತಮ್ಮ ಸೈನಿಕರನ್ನೇ ತುಳಿಯುತ್ತಲಿವೆ. ಸೇನಾಪತಿಯು ಸೈನಿಕರನ್ನು ತಡೆದು ನಿಲ್ಲಿಸಲು ಪ್ರಯತ್ನಿಸುತ್ತಿರುವರು. ಆದರೆ ಅವರ ಯತ್ನ ನಡೆಯದಾಗಿದೆ. ಆನೆಗಳು ಓಡತೊಡಗಿದವು. ವೈರಿಗಳ ಸೈನ್ಯ ಮುನ್ನುಗ್ಗುತ್ತಲಿದೆ. ಈಗ ಯಾವ ಆಶೆಯೂ ಉಳಿಯಲಿಲ್ಲ. ಮಹಾರಾಜರು ಸೋತಂತೆಯೇ! ಹಿಂದುಸ್ಥಾನದ ಸಿಪಾಯಿಗಳು ಓಡ ತೊಡಗಿದರು ಇನ್ನು ಸೋಲು ನಿಶ್ಚಯ.

ವೈರಿಗಳು ನಮ್ಮ ಆನೆಯ ಸೊಂಡಿಗಳನ್ನು ಕತ್ತರಿಸುತ್ತಲಿರುವರು. ಅವು ಸಿಟ್ಟು ಸಂಕಟಗಳಿಂದ ತಮ್ಮ ಸೈನಿಕರನ್ನೇ ತುಳಿದು ಕೊಲ್ಲುತ್ತಿರುವವು. ಪುರುರಾಜರು ಸೋತರು. ಹಿಂದುಸ್ಥಾನವು ಸೋತಿತು.

ಮಹಾರಾಜರು ಕಾಣುವದಿಲ್ಲವಲ್ಲಾ! ಹಾಂ.... ಅಲ್ಲಿದೆ ಅವರ ಆನೆ. ಮಾವುತ ಸತ್ತಿರುವನು. ಮೂರ್ಛೆಗೊಂಡ ಮಹಾರಾಜರ ದೇಹವು ಆನೆಯಿಂದ ಕೆಳಗೆ ಜರೆಯುತ್ತಿದೆ. ಅವರ ಕಾಲಿನಿಂದ ರಕ್ತ ಸುರಿಯುತ್ತಿದೆ. ಆನೆಯು ಮಹಾರಾಜರನ್ನು ಉಳಿಸಿಕೊಳ್ಳಲು ಅರಮನೆಯ ಕಡೆಗೆ ಓಡಿ ಬರುತ್ತದೆ. ಆ ಮೂಕ ಪ್ರಾಣಿಗೂ ಗೊತ್ತಾಯಿತು ತನ್ನ ಒಡೆಯನೀಗ ಪ್ರಾಣ ಸಂಕಟದಲ್ಲಿರುವದು, ಅವನನ್ನು ಉಳಿಸುವದು ತನ್ನ ಕರ್ತವ್ಯವೆಂದರಿಯಿತು. ಶಕ್ಯವಿದ್ದಷ್ಟು ಜೋರಿನಿಂದ ಓಡತೊಡಗಿತು. ಅಷ್ಟರಲ್ಲಿ ಅಂಭಿರಾಜನು ತನ್ನ ಜನರೊಡನೆ ಮುಂದೆ ಬಂದು ಅದರ ಸೊಂಡಿಯನ್ನು ಕತ್ತರಿಸಿದನು. ಆಗದರ ಸಂಕಟ ಹೇಳತೀರದು. ಆದರೂ ತನ್ನ ಧರ್ಮ ಬಿಡಲಿಲ್ಲ. ತನ್ನ ಸಂಕಟವನ್ನು ಸಹಿಸಿಕೊಂಡೂ ಮಹಾರಾಜರನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಆದರೆ ವಿಧಿಯು ಮಾರ್ಗ ಮಾಡಿ ಕೊಡಲಿಲ್ಲ. ಆನೆಯಮೇಲೆ ನಾಲ್ಕೂನಿಟ್ಟಿನಿಂದ ಒಂದೇಸವನೇ ಬಾಣಗಳ ಸುರಿಮಳೆಯಾಗುತ್ತಿದೆ ಅದರ ಮೈತುಂಬ ಘಾಯಗಳಾದವು. ಆದರ ಅಂತ್ಯಕಾಲವು ಸಮೀಪಿಸಿತು. ಆಗದು ತನ್ನ ಮುಂಡ ಸೊಂಡೆಯನ್ನೇ ಮೇಲೆ ಮಾಡಿ ದೇವರೇ! ಮಹಾರಾಜರನ್ನು ಈವರೆಗೂ ನಾನು ರಕ್ಷಣೆಮಾಡಿ ತನ್ನ ಧರ್ಮವನ್ನು ನಾನು ಪೂರೈಸಿದೆ. ಇನ್ನುಮೇಲೆ ಅವರನ್ನು ರಕ್ಷಣೆ

ಮಾಡುವ ಭಾರವು ನಿನ್ನದು. ಎಂದು ದೇವರಲ್ಲಿ ಮೊರೆಯಿಟ್ಟು ನೆಲದಮೇಲೆ ಮಲಗಿತು. ಅಂಭಿರಾಜನು ತನ್ನ ಜನರೊಡನೆ ಬಂದು, ಮಹಾರಾಜರ ಮೂರ್ಛೆಗೊಂಡ ದೇಹವನ್ನು ತಮ್ಮ ವಶಪಡಿಸಿಕೊಂಡು ಹೋದನು.

ಧನ್ಯ ಧನ್ಯ ಪುರುರಾಜ! ನೀನು ನಿಜವಾಗಿಯೂ ಪುರುಷ ಪುತ್ರನು. ತಂಗಿಯಾದವಳ ಮಾಂಗಲ್ಯವನ್ನೂ, ಯುದ್ಧದಲ್ಲಿ ಸಿಕಂದರನನ್ನು ಕೊಲ್ಲುವದಿಲ್ಲೆಂದು ಕೊಟ್ಟ ವಚನವನ್ನೂ ಉಳಿಸಿ ಕೊಂಡಿ, ಅದಕ್ಕಾಗಿ ನಿನ್ನ ಜೀವವನ್ನೂ, ಮಾನ ಮರ್ಯಾದೆಗಳನ್ನೂ ಪಣಕೆ, ಹಚ್ಚಿದ ಮಹಾನು ಭಾವನೇ! ನೀನೇ ಧನ್ಯ.

ಈ ಯುದ್ಧದಲ್ಲಿ ನೀನು ಇತಿಹಾಸದ ದೃಷ್ಟಿಯಲ್ಲಿ ಸೋತಿರುವಿ. ಆದರೆ ನ್ಯಾಯದೃಷ್ಟಿಯಲ್ಲಿ ಗೆದ್ದಿರುವಿ. ಇತಿಹಾಸವು ಅಳಿಸಿ ಹೊಗುವದು. ನ್ಯಾಯವು ನಿರಂತರವಾಗಿ ಉಳಿಯುವದು. ಅಳಿಸಿ ಹೋಗುವದನ್ನು ಅಳಿದು ನೋಡಿ ಸ್ಥಿರತ್ವವನ್ನು ಆರಿಸಿಕೊಂಡ ಮಹಾಮತಿಯೇ! ನಿನ್ನ ಚರಿತ್ರೆ ಚಿರಕಾಲ ಉಳಿಯಲಿ :—

**ಪ್ರೇಕ್ಷಕ ಮಹಾಶಯರೇ! .......**

ವೈರಿ ವಶನಾದ ಪುರುರಾಜರ ಪರಿಸ್ಥಿತಿ ತಿಳಿದುಕೊಳ್ಳಲು ಸಿಕಂದರನಲ್ಲಿಗೆ ಹೋಗೋಣ ನಡೆಯಿರಿ.

---

# ದೃಶ್ಯ

**ಸ್ಥಾನ:—** ಸಿಕಂದರನ ಡೇರೆ. **ವೇಳೆ:-** ಪ್ರಾತಃಕ್ಕಾಲ.

( ಸಿಕಂದರನು ಸಿಂಹಾಸನದಮೇಲೆ ಕುಳಿತಿರುವನು. ಅಂಭಿರಾಜ, ಶೆಲುಕ್ಯಸ, ಯಮುನೀಸ ಮೊದಲಾದವರು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿರುವರು. ಆ ದರ್ಬಾರದಲ್ಲಿ ಸಮುರನೂ ಕೂಡ ಇರುವನು. ಆದರೆ ಅವನು ಇರಾಣದ ಡ್ರೇಸ್ಸಿನಲ್ಲಿರುವನು. ಸಿಕಂದರನ ಸಿಂಹಾಸನದ ಮೇಲುಗಡೆಯಲ್ಲಿ, ಗುರು ಅರಸ್ತು ಮತ್ತು ಇರಾಣದ ಮಹಾಕವಿ ಹೋಮರ ಇವರ ಭಾವಚಿತ್ರಗಳು ತೂಗು ಹಾಕಲ್ಪಟ್ಟಿರುವವು.

ಸಿಕಂದರನು ಒಮ್ಮೆಲೇ ಎದ್ದು ನಿಲ್ಲುವನು. ನಿಂತು ಮಾತನಾಡತೊಡ ಗುವನು. ಸಭೆಯಲ್ಲಿ ನಿಶಬ್ಧತೆ ನೆಲೆಗೊಳ್ಳುವದು. )

**ಸಿಕಂದರ:—** ಜಯಶ್ರೀಗೆ ಸದಾ ವಂದನೆಗಳು. ನಮ್ಮ ಈ ಗೆಲುವಿಗಾಗಿ ಸಹಾಯ ಸಹಕಾರಗಳನ್ನು ನೀಡಿದ ಮಹಾಜನರಿಗೆ, ನನ್ನ ಅಭಿನಂದನೆಗಳು. ಇಂದಿನ ಈ ಯುದ್ಧದಿಂದ, ನಮ್ಮ ಸತ್ವ ಪರೀಕ್ಷೆ ಯಾಗಿ, ಸೋಸಿ, ಶುದ್ಧಮಾಡಿದ ಚೊಕ್ಕ ಬಂಗಾರದಂತೆ ನಾವು ತೇಜಃಪುಂಜರಾದೆವು. ಇಂದಿನ ಈ ಸುಖ ಸಂತೋಷಗಳಲ್ಲಿ ಹಾಜ ರಿರುವ ನಮ್ಮ ಶೂರ ಸೈನಿಕರ ಶಕ್ತಿ ಸಾಹಸಗಳಿಗೆ ನನ್ನ ಅಭಿ ನಂದನೆಗಳು. ಆದರೆ, ಇದಕ್ಕೂ ಹೆಚ್ಚಾಗಿ ಈ ನಮ್ಮ ಸುಖ ಸಂತೋಷಗಳಲ್ಲಿ ಕೂಡಿಕೊಳ್ಳದೆ, ಮರಣದ ಮರೆಯಲ್ಲಿ ನಿಂತು ನೋಡುತ್ತಿರುವ, ಆ ಮಹಾ ಹುತಾತ್ಮರಿಗೆ ನನ್ನ ಮಹಾ ವಂದನೆ ಗಳು. ಯುನಾನ ಜಿಂದಾಬಾದ ! ಯುನಾನಸೇನಾ ಜಿಂದಾ ಬಾದ ! ಯುನಾನ ಹುತಾತ್ಮ ಜಿಂದಾಬಾದ !!

**ಇಡೀ ಸಭಾ ಜನರುಃ** ( ಜೋರಿನಿಂದ ) ಅಲೆಕ್ಝಾಂಡರ ಜಿಂದಾಬಾದ ! ಚಕ್ರವರ್ತಿ ಜಿಂದಾಬಾದ! ಯುನಾನ ಹುತಾತ್ಮ ಜಿಂದಾಬಾದ !

( ಸಮರನು ಮಾತ್ರ ಸುಮ್ಮನಿರುವನು. ಇಡೀ ದರ್ಬಾರವೇ ಅವ ನನ್ನು ನೋಡತೊಡಗುವದು. ಮತ್ತು ಅವನೇಕೆ ಜಯಕಾರ ಮಾಡಲಿಲ್ಲ ಎಂದು ಆಲೋಚಿಸ ತೊಡಗುವರು. )

**ಸಿಕಂದರಃ —** ದೇವರ ದಯದಿಂದ ಇಂದಿನ ಕಾರ್ಯಕ್ರಮ ಪ್ರಾರಂಭ ವಾಗಲಿ

( ಸಿಕಂದರನು ಕೂತುಕೊಳ್ಳುವನು. ಯಮುನೀಸನು ಕೈಸನ್ನೆ ಮಾಡುವನು ಆ ಕೂಡಲೇ ವಾದ್ಯಗಳು ಬಾರಿಸ ತೊಡಗುವವು ಸಮರನು ಲಕ್ಷ್ಯಕೊಟ್ಟು ನೋಡತೊಡಗುವನು. ಪುರುರಾಜನು ನಾಲ್ಕುಜನ ಇರಾಣ ಸಿಪಾಯಿಗಳ ಕಾವಲಿನಲ್ಲಿ ಬರುವನು. ಅವನ ಕೈಯಲ್ಲಿ ಬೇಡಿ ಗಳಿವೆ ಆದರೆ ಅವನ ಮುಖದಮೇಲಿನ ತೇಜದಲ್ಲಿ ಯಾವ ಹೆಚ್ಚು ಕಡಿ ಮೆಯೂ ಆಗಿಲ್ಲ. ಅವನು ಅರಮನೆಯಲ್ಲಿದ್ದಾಗಿನ ತೇಜವೇ ಈಗಲೂ

ಅದೆ ಪುರುರಾಜನು ಸಿಂಹಾಸನದ ಎದುರು ಬಂದು ನಿಂತುಕೊಳ್ಳುವನು. ಆಗ ಅಮರನು ತನ್ನ ತಲವಾರದ ಮೇಲೆ ಕೈಯಿಡುವನು. ಸಿಕಂದರನು ಚಟ್ಟನೇ ಎದ್ದು ನಿಲ್ಲುವನು ಆಗೆಲ್ಲ ದರ್ಬಾರವೂ ಎದ್ದು ನಿಲ್ಲುವದು. ವಾದ್ಯಗಳು ಬಂದಾಗುವವು. ಪುರುರಾಜನು ಧೈರ್ಯ ಸ್ಥೈರ್ಯಗಳಿಂದಲೂ, ಶಾಂತ ಚಿತ್ತದಿಂದಲೂ, ನಿಂತಿರುವನು. ಆಗವನು ನಿಂತ ದೃಶ್ಯ ನೋಡಿದರೆ, ದರ್ಬಾರದ ಪರಿಚಿತನು ನಿಂಶಂತೆ ನಿಂತಿರುವನು.)

**ಸಿಕಂದರ:—** ಬನ್ನಿರಿ ಬಂಟ ವೈರಿಗಳೆ! ನಮ್ಮ ದರ್ಬಾರವು ನಿಮ್ಮನ್ನು ಸ್ವಾಗತಿಸುವದು. ನಾನು ಕೂಡಾ ನಿಮ್ಮನ್ನು ಸ್ವಾಗತಿಸುವೆನು. ಈ ನಮ್ಮ ಸ್ವಾಗತವನ್ನು ಒಪ್ಪಿಕೊಳ್ಳಿ.

**ಪುರು:—** ನಿಮ್ಮ ಸ್ವಾಗತದ ಪದ್ಧತಿಯು, ( ಕೈ ಬೇಡಿಯನ್ನು ತೋರಿಸುತ್ತ ) ಕೈಗೆ ಬೇಡಿಯನ್ನು ತೊಡಿಸುವದು. ನಾನು ಇದನ್ನು ಸ್ವೀಕರಿಸುವೆನು. ನಿಮ್ಮ ಸ್ವಾಗತದ ಪೂರ್ಣ ಶರ್ತುಗಳನ್ನೂ ಪೂರೈಸುವೆನು. ಇಲ್ಲವಾದರೆ, – (ಮಾತು ಅರ್ಧಕ್ಕೆ ನಿಲ್ಲಿಸುವನು.)

**ಸಿಕಂದರ:—** ( ಖಿನ್ ಮನಸ್ಕನಾಗಿ ) ಶೆಲುಕ್ಯಸ! ಮಹಾರಾಜರಿಗೆ ಬೇಡಿ ತೊಡಿಸಿದವರಾರು ? ಅವರನ್ನು ದರ್ಬಾರದ ನಂತರ ಪತ್ತೆ ಮಾಡು, ಅವನಿಗೆ ನಾನು ಸಿಕ್ಷೆ ವಿಧಿಸುವೆನು. ( ಪುರುರಾಜನನ್ನು ಕುರಿತು ) ಮಹಾರಾಜ ! ನಮ್ಮ ಜನರು ಮಾಡಿದ ತಪ್ಪಿಗಾಗಿ ನನಗೆ ಕೆಡಕೆನಿಸುತ್ತದೆ ಹಾಗಾಗಬಾರದಿತ್ತು.

( ಸಿಕಂದರ ಕೂಡುಕೊಳ್ಳುವನು. ದರ್ಬಾರದವರೂ ಕೂಡುಕೊಳ್ಳುವರು. ಅಷ್ಟರಲ್ಲಿ ಶೆಲುಕ್ಯಸನು ಪುರುರಾಜನ ಕೈಗಿರುವ ಬೇಡಿಯನ್ನು ಬಿಚ್ಚುವನು. ಆಗ ಸಮರನ ಮುಖದಮೇಲೆ ಸಂತೋಷದ ಚಹರೆ ತುಂಬಿ ತುಳುಕುವದು. ಮತ್ತು ಅವನಲ್ಲಿ ನಿರ್ಭಯತೆಯೂ ಉಂಟಾಗುವದು.)

**ಸಿಕಂದರ:—** ನೋಡಿದಿರ್‍ಯಾ ಪುರುಮಹಾರಾಜ ! ನಮ್ಮ ದೈವವು ಎಷ್ಟು ಘಟ್ಟಿಮುಟ್ಟದೆ ಅದು ನಿಮ್ಮನ್ನು ಒಂದೇ ಒಂದು ದಿನದಲ್ಲಿ ಗೆದ್ದಿತು.

**ಪುರು:—** ನಮ್ಮನ್ನು ಗೆದ್ದದ್ದು, ನಿಮ್ಮ ನಸೀಬವಲ್ಲ. ನಿಮ್ಮ ಮೋಸಗಾರಿಕೆ. ನಿಮ್ಮ ನಸೀಬ ಅಜಯವಾಗಿದ್ದರೆ; ಹಗಲಿನಲ್ಲಿ ನದಿ

ದಾಟಬೇಕಾಗಿತ್ತು. ಕತ್ತಲೆಯ ಸಹಾಯ ತೆಗೆದುಕೊಂಡು ಕಳ್ಳ ರಂತೆ ನದಿ ದಾಟದಿರೇಕೆ ?

**ಸಿಕಂದರ:**— ಯುದ್ಧದಲ್ಲಿ ಮೋಸಗೀಸಗಳೆಲ್ಲವೂ ಸರಿಯಾದವುಗಳು.

**ಪುರು:**— ಅಂದರೇನು! ರಾಜದೂತನ ವೇಷದಲ್ಲಿ ಬಂದಿದ್ದ ಬಾದಶಹ ನನ್ನು ಕೊಂದಿದ್ದರೂ ಯೋಗ್ಯವಾಗುತ್ತಿತ್ತು.

**ಸಿಕಂದರ:**— ಆಗ, ನೀವು ನಮ್ಮ ಮೇಲೆ ಉಪಕಾರವನ್ನೇನೂ ಮಾಡಲಿಲ್ಲ. ನೀವು ನಿಮ್ಮ ಶಕ್ತಿಯಮೇಲೆ ವಿಶ್ವಾಸವನ್ನಿಟ್ಟದ್ದಿರಿ, ಈಗ ನಿಮಗೆ ಗೊತ್ತಾಗಿರಲಿಕ್ಕೆಬೇಕು. ನಿಮ್ಮ ತಿಳುವಳಿಕೆ ತಪ್ಪಿತೆಂದು. ಆ ಬಗ್ಗೆ ಇಂದು ನೀವು ಪಶ್ಚಾತ್ತಾಪ ಪಡುವದಿಲ್ಲವೆ ?

**ಪುರು:**— ಅಂಥ ತಪ್ಪುಗಳನ್ನು ಸಾವಿರ ಸಲ ಮಾಡಿದರೂ ಸಾವಿರದಾ ಒಂದನೇ ಸಲವಾದರೂ, ನಾವು ಅದನ್ನೇ ಮಾಡುವೆವು ಆ ಬಗ್ಗೆ ನಾವು ಸ್ವಲ್ಪವೂ ಪಶ್ಚಾತ್ತಾಪ ಪಡುವದಿಲ್ಲ. ಪಶ್ಚಾತ್ತಾಪವು ಹೇಡಿಗಾಗಿರುತ್ತದೆಯೇ ಹೊರ್ತು ವೀರರಿಗಲ್ಲ. ವೀರರು ಎಂದೂ ಪಶ್ಚಾತ್ತಾಪ ಪಡುವದಿಲ್ಲ.

**ಸಿಕಂದರ:**— ನಾನು ಬಹಳ ಬಾದಶಹರನ್ನು ನೋಡಿರುವೆನು. ಬಹಳ ಬಾದಶಹರನ್ನೂ ಸೋಲಿಸಿರುವೆನು. ಆದರೆ ಚಕ್ರವರ್ತಿಯು ಸಾಕ್ಷಿ ಯಾಗಿ ಹೇಳಬೇಕಾದರೆ ! ನಿಮ್ಮಂಥ ಶೂರ ಮತ್ತು ಧೀರ ಬಾದ ಶಹನನ್ನು ಈ ವರೆಗೂ ನೋಡಿರಲಿಲ್ಲ.

**ಪುರು:**— ( ನಗುತ್ತ )ನಾನೂ ಕೂಡ ಬಹಳ ರಾಜರನ್ನು ನೋಡಿದ್ದೇನೆ, ಬಹಳ ರಾಜರ ರಾಜ್ಯವನ್ನೂ ಕಸಿದು ಕೊಂಡಿದ್ದೇನೆ ಆದರೆ ಶಸ್ತ್ರ ಸಾಕ್ಷಿಯಾಗಿಯೂ, ನಿಮ್ಮಂಥ ನೀಚ ಮತ್ತು ಸೊಕ್ಕಿನ ರಾಜರನ್ನು ಈ ವರೆಗೂ ನಾನು ನೋಡಿರಲಿಲ್ಲ.

( ಶೆಲುಕ್ಯಸನು ತನ್ನ ಕಠಾರಿಯನ್ನು ಹೊರಗೆಳೆದು ಪುರುವತ್ತ ಹೋಗುವವನು. )

**ಶೆಲುಕ್ಯಸ:**—ಎಚ್ಚರಿಕೆಯಿಂದ ಮಾತನಾಡು. ಇರಾಣದ ಮಹಾರಾಜಾಧಿ ರಾಜನೆದುರು ನಿಂತಿರುವಿ. ಅವರ ಸೈನಿಕರ ರಕ್ತಕೂಡ ಇನ್ನೂ ಬೆಚ್ಚಗಿದೆ !

( ಆಗ ಸಮರನು ಕೂಡ ತಲವಾರದ ಮೇಲೆ ಕೈಯಿಟ್ಟು ಏಳಬೇಕೆನ್ನುವನು. ಆದರೆ ಅಷ್ಟಕ್ಕೆ ಸುಮ್ಮನಾಗುವನು. ಸಿಕಂದರನು ಓರೆಗಣ್ಣಿನಿಂದ ನೋಡಿ ನಗುವನು. ಸಿಕಂದರನು ತನ್ನನ್ನು ನೋಡಿದನೆಂದು ಸಮರನಿಗೆ ಗೊತ್ತಾಗುವದಿಲ್ಲ. ಆದ್ದರಿಂದವನು ನಿರ್ಭಯದಿಂದ ಕೂತುಕೊಳ್ಳುವನು ಪುರುರಾಜನು ಶೆಲುಕ್ಯಸನನ್ನು ನೋಡಿ ಹೀಗನ್ನುವನು-)

**ಪುರು:**—( ಭಯ ಭೀತಿಗಳಿಲ್ಲದೆ ) ನೀನು ಯಾರು ? ಇಷ್ಟುಕೂಡ ನಿನಗೆ ಗೊತ್ತಾಗುವದಿಲ್ಲವೇ ! ರಾಜರಿಬ್ಬರು, ತಮ್ಮ ತಮ್ಮಲ್ಲಿ ಮಾತನಾಡುತ್ತಿರುವಾಗ, ನಡುವೆ ಬಾಯಿಹಾಕಿ ಮಾತಾಡುವದರಿಂದ ಅವರಿಬ್ಬರಿಗೂ ಅಪಮಾನ ಮಾಡಿದಂತಾಗುವದಿಲ್ಲವೇ ? ಜಜರ ನೀನು ನಮ್ಮ ಮನುಷ್ಯನಾಗಿದ್ದರೆ, ದರ್ಬಾರದಿಂದ ನಿನ್ನನ್ನು ಹೊರಗೆ ಹಾಕಿ, ಹೋಗು ! ನೀನು ಮೊದಲು, ದರ್ಬಾರದಲ್ಲಿ ಕೂಡ್ರುವ ಮತ್ತು ಮಾತಾಡುವ ನಿಯಮ ನಿರ್ಬಂಧನೆಗಳನ್ನು ಕಲಿತು ಬಾ ಎಂದು ಹೇಳುತ್ತಿದ್ದೆ

( ಅಂಭಿರಾಜನು ನಿಸ್ತೇಜಿತನಾಗಿ ನೋಡುವನು. ಸಮರನ ಮುಖದ ಮೇಲೆ ಅಭಿಮಾನದ ಮಿಂಚು ಮಿನುಗುವದು. ದರ್ಬಾರದ ಎಲ್ಲ ಜನರಲ್ಲಿ ಮುಂದೇನಾಗುವದೋ ಎಂಬ ಭಯ ತುಂಬಿಕೊಂಡಿರುವದು. )

**ಸಿಕಂದರ:**—ಶೆಲುಕ್ಯಸ! ನೀನು ತಪ್ಪು ಮಾಡಿದಿ. ಮಹಾರಾಜರ ಕ್ಷಮಾ ಕೇಳಿಕೋ.

**ಶೆಲುಕ್ಯಸ:**— ( ಪುರುರಾಜನ ಮುಂದೆ ಬಂದು ನಿಂತು ) ಮಹಾರಾಜ! ತಪ್ಪಾಯಿತು ಕ್ಷಮಿಸಿರಿ.

**ಪುರು:**— ನಾನು ಕ್ಷಮಿಸಿದೆ.

**ಸಿಕಂದರ:**—( ಪುರುರಾಜನ ಕಡೆಗೆ ಹೊರಳಿ, ನಮ್ರತೆಯಿಂದ ) ನನಗೆ ನಿಮ್ಮ ಧೈರ್ಯ ಶೌರ್ಯಗಳು ಆನಂದವನ್ನುಂಟುಮಾಡಿದವು. ಆದರೀಗ ನಿಮ್ಮೊಡನೆ ನಾನು ಯಾವರೀತಿಯಲ್ಲಿ ನಡೆದುಕೊಳ್ಳಬೇಕು ನೀವೇ ಹೇಳಿರಿ ?

**ಪುರು:**— ( ನಿರ್ಭಯದಿಂದ ) ಒಬ್ಬರಾಜನು ಮತ್ತೊಬ್ಬ ರಾಜನನ್ನು ಕಂಡಾಗ ಯಾವ ಪದ್ಧತಿಯಲ್ಲಿ ನಡೆಯಬೇಕೋ ಹಾಗೆ.

ತಡೆದು ನಿಲ್ಲಿಸುವನು. ಪುರುರಾಜನು ನಗುವನು ಅಂಭಿರಾಜನು ಹೆದರುವನು. ದರ್ಬಾರದ ಜನರು ಗಾಬರಿಯಾಗುವರು. ಸಿಕಂದರ ಸಾವಕಾಶವಾಗಿ ಹಿಂದೆ ಸರಿಯುತ್ತ ಹೋಗಿ ತನ್ನ ಸ್ಥಳದ ಮೇಲೆ ಕೂಡ್ರುವನು.:— )

**ಸಿಕಂದರ:**— ತರುಣ ಸ್ನೇಹಿತನೆ! ಇದು ನಿನ್ನ ತಪ್ಪು. ಆದರೂ ನಾನು ನಿನ್ನನ್ನು ಕ್ಷಮಿಸುವೆನು. ಧೈರ್ಯ, ಶೌರ್ಯಗಳು ಇರಬೇಕಾದದ್ದು. ಧೈರ್ಯ ಶೌರ್ಯಗಳನ್ನು ಎದುರಿಸುವದಕ್ಕಾಗಿಯೇ ಹೊರ್ತು, ಹಿರಿಯರನ್ನು ಹೀಯಾಳಿಸುವದಕ್ಕಾಗಿಯಲ್ಲ. (ಅಂಭಿರಾಜನನ್ನು ಕುರಿತು ) ಮಹಾರಾಜ! ನನಗೆ ಕೆಡಕೆನಿಸುತ್ತದೆ.

( ಪಡದೆ ಬಿಳುವದು )

—*§*—

## ದೃಶ್ಯ ೭

ಸ್ಥಳ:— ಪುರುರಾಜನ ಅರಮನೆ. ವೇಳೆ:— ರಾತ್ರಿ

( ಪುರುರಾಜನು ಕತ್ತಲೆಯ ಕೋಣೆಯಲ್ಲಿ ಸ್ತಬ್ಧನಾಗಿ ನಿಂತಿರುವನು. ಮತ್ತು ವಿಚಾರ ಮಾಡುತ್ತಿರುವನು. ಅಷ್ಟರಲ್ಲಿ ಸಮರ ಮತ್ತು ರುಕ್ಸಾನರು ಬರುವರು. )

**ರುಕ್ಸಾನಾ:**— ಏನು ಮಾಡುತ್ತಿರುವಿ ಅಣ್ಣಾ !

**ಪುರು:**— ( ಉದಾಸೀನ ಸ್ವರದಲ್ಲಿ ) ಏನೂ ಮಾಡುತ್ತಿಲ್ಲ ತಂಗಿ ! ಆದರೆ ಏನುಮಾಡಿದೆ ! ಏನಾಯಿತು!! ಮುಂದೇನಾಗುವದು! ಅದನ್ನು ಆಲೋಚಿಸುತ್ತಿರುವೆನು.

**ರುಕ್ಸಾನಾ:**— ದೀಪ ಮುಡಿಸದೆ ಕತ್ತಲೆಯಲ್ಲಿ ಹೀಗೇಕೆ ನಿಂತಿರುವಿರಿ?

**ಪುರು:**— ಸೋತವನ ಮುಖವನ್ನು ಮತ್ತೊಬ್ಬರು ನೋಡಬಾರದೆಂದು.

**ರುಕ್ಸಾನಾ:**— ನೀವು ಸೋತಿರುವಿರೆಂದು ಯಾರು ಹೇಳಿರುವರು? ಸೋತವನಿಗೆ ಗೆದ್ದವನಿಂದ ಮರ್ಯಾದೆ ಸಿಗುವದೆ ? ನಿಮ್ಮ ರಾಜ್ಯ ನಿಮಗು ಳಿಯುತ್ತಿತ್ತೆ? ಬೇರೆ ರಾಜ್ಯಗಳು ದೊರೆಯುತ್ತಿದ್ದವೆ? ಅವುಗ

ಳನ್ನು ಗೆದ್ದವನು ಸ್ನೇಹಿತನ ಸವಿನೆನಪಿಗಾಗಿ ಹಸ್ತಾಂತರಿಸಿದ್ದಾನೆ. ಜಗತ್ತನ್ನೇ ಗೆದೆಯುತ್ತೇನೆಂದು ಹೊರಟವನನ್ನು ನೀವು ಗೆದ್ದಿರು ವಿರಿ. ಸಿಕಂದರನು ರಾಜ್ಯಗಳನ್ನು ಗೆದೆಯುವನು. ಆದರೆ ನೀವು ಅವನ ಹೃದವಯನ್ನೇ ಗೆದ್ದಿರುವಿರಿ. ನಿಸರ್ಗ ನಿಯಮದ ಸ್ತ್ರೀಯೂ, ಅವನ ಪ್ರೇಯಸಿಯೂ ಆದ, ನಾನೇ ಅವನನ್ನು ಪೂರ್ಣ ಗೆದೆಯುವ ದಾಗಲಿಲ್ಲ. ಅಂಥ ಕಠಿಣ ವ್ಯಕ್ತಿಯನ್ನು ನೀವು ಗೆದ್ದಿರುವಿರಿ.

ಪುರು:— ನೀನನ್ನುವಿ! ನಾನು ಗೆದ್ದಿರುವೆನೆಂದು. ನಾನು ತಿಳಿದಿರುವೆನು ಮರಣವನ್ನು ಕೈಮಾಡಿ ಕರೆದಿರುವೆನೆಂದು. ಯಾಕಂದರೆ ಸೋಲು ಸಾವಿಗಿಂತಲೂ ಮೇಲು. ನಾನು ಸತ್ತು ಹೋಗಿದ್ದರೆ ಒಳ್ಳೆಯದಿತ್ತು ಯಾಕಂದರೆ; ಪುರು ಸೋತನು, ಸಿಕಂದರನು ಅವನನ್ನು ಕ್ಷಮಿ ಸಿದನು. ಎಂದು ಹೇಳುವ ಜನಾಂಗದ ನಿರ್ಣಯವನ್ನು ನನ್ನ ಕಿವಿಗಳು ಕೇಳುತ್ತಿರಲಿಲ್ಲ. - ದೇವರೇ ! ಸೋಲನ್ನು ಕಡು ವೈರಿಗೂ ಕೊಡಬೇಡ!

ರುಕ್ಸಾನಾ:— ಪುರುರಾಜ ಸೋತನೆಂದು ಯಾರು ಹೇಳುವರೋ ಅವರು ಕುರುಡರಿರುವರು !

ಪುರು:— ಈ ವಿಚಾರದಲ್ಲಿ ಜಗತ್ತಿನ ಜನಾಂಗವೇ ಕುರುಡಾಗುವದು, ಸಹಜ. ಈ ಸೋಲಿನ ನಿಜಕಾರಣಗಳನ್ನು ಅವರೇನುಬಲ್ಲರಮ್ಮಾ! ಒಂದು ವೇಳೆ ಗೊತ್ತಾದರೂ ಕಾರಣಗಳನ್ನು ಕಡೆಗಣಿಸಿ, ನಿರ್ಣಯ ವನ್ನು ಎತ್ತಿ ಹಿಡಿಯುವರು. ಭಾಂತದ ಮುಂದಿನ ಜನಾಂಗವು ಇತಿಹಾಸ ಓದಿ, ಇದನ್ನೇ ಹೇಳುವರು. ಯಾಕಂದರೆ ಇತಿ ಹಾಸವು ಪುರು ಸೋತನು, ಎಂದಿಷ್ಟೇ ಹೇಳುವದು. ಯಾಕೆ ಸೋತನು? ಇದನ್ನು ಹೇಳುವದಿಲ್ಲ. ನಾನು, ನೀನು, ಪ್ರಾರ್ಥನಾ ಮತ್ತು ಸಮರ ಇವರ ಹೊರ್ತು ಉಳಿದವರಿಗೆ ಸೋಲಿನ ಕಾರಣ ಗೊತ್ತಿಲ್ಲ. ನಾನು, ಸಿಕಂದರನನ್ನು ಕೊಲ್ಲುವದಿಲ್ಲೆಂದು ನಿನಗೆ ವಚನ ಕೊಡದಿದ್ದರೆ ನಾನು ಗೆದೆಯಲು ಸಾಧ್ಯವಿತ್ತು. ಯುದ್ಧ ಭೂಮಿಯಲ್ಲಿ ಸಿಕಂದರನು ಕೆಳಗೆ ಬಿದ್ದಾಗ, ಅವನನ್ನು ಕೊಲ್ಲಲು ನನ್ನ ಕೈಗಳು ಬರ್ಚಿಯನ್ನೆತ್ತಿದ್ದವು. ಅವನ ಎದೆಗೆ ಗುರಿ

ಇಟ್ಟು ಹೊಡೆಯಲು ಹಾತೊರೆಯುತ್ತಿದ್ದವು. ಆದರೆ ನಿನಗೆ ಕೊಟ್ಟ ವಚನವು ಅವುಗಳನ್ನು ಕಟ್ಟಿಹಾಕಿದವು. ನಿನಗೆ ವಚನ ಕೊಡದೆ ಹೋಗಿದ್ದರೆ ಸಿಕಂದರನು ಸತ್ತು ಹೋಗುತ್ತಿದ್ದನು. ಅವನ ಸೈನಿಕರು ಯುದ್ಧ ಭೂಮಿಯಿಂದ ಓಡಿ ಹೋಗುತ್ತಿದ್ದರು. ಆಗ ವಿಜಯ ನಮ್ಮದಾಗುತ್ತಿತ್ತು. ಇತಿಹಾಸವೂ ಅದನ್ನೇ ಹೇಳುತ್ತಿತ್ತು. ಆದರೆ ( ದುಃಖದಿಂದ ) ದೇವರು ನಿನ್ನ ಮೂಲಕ, ನಿನಗೆ ಕೊಟ್ಟ ವಚನದ ಮೂಲಕ, ಯುದ್ಧದ ಪರಿಣಾಮವನ್ನು ಪರಿವರ್ತಿಸಿದನು ಈಗ ಇತಿಹಾಸವು 'ಪುರು' ಸೋತನು, ಸಿಕಂದರನು ಗೆದ್ದನು ಸೋತ ಪುರುವನ್ನು ಸಿಕಂದರನು ಕ್ಷಮಿಸಿದನು. ಎಂದು ಹೇಳುವರು.

ಈಗ ನನ್ನ ಮುಖದಮೇಲೆ ಹತ್ತಿದ ಕಪ್ಪು ಎಂದಿಗೂ ಹೋಗದು. ಆದರೆ ಅದು ನನ್ನ ತಪ್ಪು ! ಆಗ ನಾನು ಮೂರ್ಖನಾಗಿದ್ದೆ, ಕುರುಡನಾಗಿದ್ದೆ, ಅಂತೆಯೇ ವಿಚಾರ ಮಾಡದೆ ಪ್ರತಿಜ್ಞೆ ಮಾಡಿದೆ. ಆಗ ನನ್ನ ಹೃದಯದಲ್ಲಿಯ ಜಾಗ್ರತೆಯ ಜ್ಯೋತಿ ಆರಿ ಹೋಗಿತ್ತು. ಯಾರ ಹೃದಯದಲ್ಲಿಯ ಜಾಗ್ರತೆಯ ಜ್ಯೋತಿ ಆರಿ ಹೋಗುವದೋ ಅವರನ್ನು ಮರ್ಯಾದೆ ಎಂದೂ ಮುಟ್ಟದು. ಶಾಂತಿ ಕದಡುವದು. ಬದುಕು ಬೇಸರವಾಗುವದು.

( ರುಕ್ಸಾನಳನ್ನು ಕುರಿತು ) ಯಾರು ನನ್ನ ಮುಖಕ್ಕೆ ಮಸಿ ಬಳಿದರೋ, ಅವರ ಮುಖ ಮೊದಲೇ ಮಸಿಯಲ್ಲಿ ಮುಳುಗಿದೆ. ಇನ್ನೂ ಏನಾದರೂ ಉಳಿದಿದ್ದರೆ ಹೇಳಿರಿ?

**ರುಕ್ಸಾನಾ:**— ಹಾಗನ್ನಬೇಡಣ್ಣಾ ! ಹಾಗನ್ನಬೇಡ !! ನನ್ನ ಎದೆಯಲ್ಲಿ ಚೂರಿಯನ್ನು ಚುಚ್ಚಿದರೂ ನನಗೆ ಕೆಡಕೆನಿಸಲಾರದು. ಆದರೆ ಈ ನಿನ್ನ ಮಾತುಗಳಿಂದ ನನಗೆ ಮಹಾ ಸಂಕಟವಾಗುತ್ತದೆ. —ನಾನು ನಿನ್ನ ತಂಗಿ ಇದ್ದೇನಣ್ಣಾ ! ಹಾಗನ್ನಬೇಡ!

( ಎಂದು ಅನ್ನುತ್ತ ಪುರುರಾಜನ ಕಾಲ ಮೇಲೆ ಬಿದ್ದು ಅಳುವಳು )

**ಪುರು:**—ರುಕ್ಸಾನಾ! ನೀನು ನನ್ನ ತಂಗಿಯಾಗಿದ್ದುದು ನಿಜ. ಹಿಂದುಸ್ಥಾನದಲ್ಲಿ ಅಣ್ಣನ ಕಾಲು ತಂಗಿ ಹಿಡಿಯುವದಿಲ್ಲ. ನೀನು ನಿನ್ನ ಮನಸ್ಸಿಗೆ ಹಚ್ಚಿಕೊಳ್ಳದಿರು. ಇದರಲ್ಲಿ ನಿನ್ನದೇನೂ ತಪ್ಪಿಲ್ಲ. ತಪ್ಪು ನನ್ನದು

ನಿನಗೇನೂ ಅನ್ನುವದಿಲ್ಲ ನಾನೇನು ಅನ್ನುವೆನೋ ಅದನ್ನು ನನಗೆ ನಾನೇ ಅಂದುಕೊಳ್ಳುವೆನು.

**ರುಕ್ಸಾನಾ:—** ( ಕಣ್ಣೀರುದಿರುಸುತ್ತ ) ನನಗಾವ ಮಾರ್ಗವೂ ಕಾಣಲೊಲ್ಲದು. ಹೇಳು! ನೀನು ಏನು ಮಾಡಬೇಕೆಂದಿರುವಿಯೋ ಅದನ್ನು ಮಾಡಲು ಸದಾ ಸಿದ್ಧಳಿರುವೆನು. ನನ್ನ ಜುಲುಮೆ ನಿಮ್ಮ ಮೇಲೆ ಬಹಳವಾಗಿದೆ. ನಾನಿರದಿದ್ದರೆ ನೀವು ನಿಶ್ಚಯವಾಗಿ ಗೆದೆಯುತ್ತಿದ್ದಿರಿ.

**ಸಮರ:—** ಈಗೇನಾಗಿದೆ ? ಈಗೊಬ್ಬ ಪುರುರಾಜ ಸೋತಿರುವನು. ಇನ್ನು ದಿನಕ್ಕೊಬ್ಬ ರಾಜರು ಸೋಲುತ್ತ ಹೋಗುವರು ಭಾರತದ ಸ್ವತಂತ್ರತೆ ದಿನದಿನಕ್ಕೂ ಮಣ್ಣುಗೂಡುತ್ತ ಹೋಗುವದು. ಸ್ವತಂತ್ರತೆಯಲ್ಲಿ ಲೋಲಾಡುತ್ತಿರುವ ಈ ಕಣ್ಣುಗಳೇ, ಮುಂದಿನ ದಾಸ್ಯತ್ವದ ದುರ್ಗತಿಯನ್ನ ಕಾಣುವವು.

**ರುಕ್ಸಾನಾ:—** ನಾನು ಕೇಳಿದ್ದೇನೆ, ಸಿಕಂದರನ ಸೈನಿಕರು. ನಿಮ್ಮ ಪ್ರಭಾವಕ್ಕೆ ಹೆದರಿರುವರು. ಮುಂದೆ ನಿಮಗಿಂತಲೂ ಹೆಚ್ಚಿನ ಪ್ರಭಾವಶಾಲಿ ರಾಜರಿರುವರೆಂದು ತಿಳಿದು ಮುಂದಿನ ದಾಳಿ ಬೇಡೆನ್ನುತ್ತಿದ್ದಾರೆ.

**ಪುರು:—** ಸೈನಿಕರು ಬೇಡೆನ್ನುತ್ತಿರಬಹುದು. ಸಿಕಂದರ ಬೇಡೆಂದಿರಲಿಕ್ಕಿಲ್ಲ. ಸಿಕಂದರನ ಬಾಯಿಂದ ನಾಲ್ಕು ಮಾತುಗಳು ಹೊರಬಿದ್ದರೆ, ಸೈನಿಕರ ಮಲಗಿದ ಮನಸ್ಸು ಪುಟಿದೇಳುವದು ಆಗವರು ದಾಳಿಮಾಡಲು ಒಂಟಿಗಾಲ ಮೇಲೆ ನಿಲ್ಲುವರು. ಪುನಃ ಯುದ್ಧಗಳಾಗುವವು. ಭಾರತವು ಪರಾಧೀನವಾಗುವದು.

**ರುಕ್ಸಾನಾ:—** ಸಾಧ್ಯವಿಲ್ಲ ಈ ದೇಶದಲ್ಲಿ ಅವನು ಪುನಃ ಯುದ್ಧ ಮಾಡಲಾರನು! ಮಾಡಲಾರನು!! ಅವನು ಈ ರಾಜ್ಯ ದಾಟಿ ಹೋಗಲಾರನು. ಅದು ಸಾಧ್ಯವಿಲ್ಲ. ( ಎಂದೆನ್ನುತ್ತ ಹೊರಟು ಹೋಗುವಳು. )

—*‡‡*—

ಸಿಕಂದರ:— ಇದಕ್ಕೂ ಹೆಚ್ಚಿಗೇನಾದರೂ ಹೇಳುವಿರಾ ?

ಪುರು:— ನಾನು ಏನು ಹೇಳಬೇಕಾಗಿತ್ತೋ ಅದನ್ನು ನಿಮ್ಮ ಮೊದಲನೇ ಪ್ರಶ್ನೆಗೆನೇ ಹೇಳಿದ್ದೇನೆ. ಅದಕ್ಕಿಂತ ಹೆಚ್ಚಿಗೆ ಹೇಳಬೇಕಾದದ್ದು ಈಗೇನೂ ಉಳಿದಿರುವುದಿಲ್ಲ.

ಸಿಕಂದರ:— ಯಮುನೀಸ ! ಪುರು ಮಹಾರಾಜರ ಈ ಎರಡೂ ಉತ್ತರಗಳನ್ನು ಸುವರ್ಣಾಕ್ಷರಗಳಿಂದ ಬರೆದಿಡು. ಯಾವಾಗ ನಾವು ಇರಾಣಕ್ಕೆ ಹೋಗುವೆವೋ ಆಗ ನಮ್ಮ ಜನರಿಗೆ ಹೇಳೋಣ. ಜಗತ್ತಿನಲ್ಲಿ ಇಂಥ ಜನರೂ ಇರುವರು, ಯುದ್ಧದಲ್ಲಿ ಅವರು ಸೋಲಬಹುದು, ಆದರೆ ಅವರ ಧೈರ್ಯವೆಂದಿಗೂ ಸೋಲದು.

( ಯಮುನೀಸನು ತಲೆತಗ್ಗಿಸುವನು. ಅಂಭಿರಾಜನು ಆಶ್ಚರ್ಯ ಚಕಿತನಾಗುವನು. )

ಸಿಕಂದರ:— ( ಮಾತು ಮುಂದುವರಿಸಿ ) ನಾವು ಇರಾಣಕ್ಕೆ ಹೋದನಂತರ ಅಲ್ಲಿಯ ಜನರಿಗೆ ಇದನ್ನೂ ಹೇಳೋಣ. ಜಗತ್ತಿನಲ್ಲಿ ತಮ್ಮ ದೈವಕ್ಕೂ (ಹಣೆಬರಹಕ್ಕೂ) ಬಗ್ಗಿ ನಡೆಯದ ಮಹಾ ಧೈರ್ಯಶಾಲಿ ಪುರುಷರೂ ಇರುವರು. ಅಂಥವರ ಮಕ್ಕಳು ಮೃತ್ಯುವಿನ ಮುಖದಲ್ಲಿ ನಿಂತಿದ್ದರೂ ಜೀವಕ್ಕಾಗಿ ಹೆದರದ ಬಂಟರು.

( ಪುರುರಾಜರು ಆಶ್ಚರ್ಯದಿಂದ ನೋಡುವರು. )

ಸಿಕಂದರ:— ( ಸಮರನ ಕಡೆಗೆ ಬಟ್ಟುಮಾಡಿ ) ಬಾ! ರಾಜಕುಮಾರ ! ಮುಂದೆ ಬಾ ! ನಾನು ನಿನ್ನನ್ನು ಸ್ವಾಗತಿಸುವೆನು. ನೀನೂ ಶೂರನಿರುವಿ. ನಿನ್ನ ಬಾಹುಗಳಂತೂ ಬಹು ಬಂಧುರವಿರುವವು.

( ಸಮರನು ಎದ್ದು ಬರುವನು, ಅವನೊಡನೆ ಇಬ್ಬರು ಸೈನಿಕರು ಎದ್ದು ಬರುವರು. ಸಿಕಂದರನು ಕೈಸನ್ನೆಯಿಂದ ಸೈನಿಕರನ್ನು ಮರಳಿ ಕಳಿಸುವನು. ಸಮರನೊಬ್ಬನೇ ಮುಂದೆ ಬರುವನು. )

ಪುರು:— ( ನಿರ್ಬಲವಾಗಿ ) ಸಮರ ! ಈ ವೇಷದಲ್ಲಿ ಇಲ್ಲೇಕೆ ? ಸಮಾಚಾರವೇನು ?

ಸಮರ:— ( ತೊದಲಿಸುತ್ತ ) ಪಿತಾಜಿ........

**ಸಿಕಂದರಃ—** ( ನಡುವೆ ಬಾಯಿ ಹಾಕಿ ) ಬಹಾದ್ದೂರ ತಂದೆಯ ಬಹದ್ದೂರ ಮಗನು, ತಂದೆಯ ದಸ್ತಗಿರಿಯನಂತರ ಆರಾಮದಿಂದ ಮನೆಯಲ್ಲಿ ಕೂಡ್ರಲಾರನು ಈ ವೇಷದಲ್ಲಿ ಬಂದು ನನ್ನನ್ನು ಕೊಲೆ ಮಾಡಬೇಕೆಂದನು. ಆಪರೆ-( ಸಮರನನ್ನು ಕುರಿತು ) ತರುಣನೇ! ಸುಧಾರಿಸಿಕೋ, ನಾನು ನಿನ್ನನ್ನು ಗುರ್ತಿಸಿದೆನು ಆದ್ದರಿಂದ ನೀನು ನನ್ನನ್ನು ಕೊಲೆ ಮಾಡದಾದಿ. ಆದರೂ ನಿನ್ನ ಧೈರ್ಯವನ್ನು ನಾನು ಹೊಗಳುತ್ತೇನೆ.

( ಪುರುರಾಜರು ಸಮರನನ್ನು ಅಭಿಮಾನ ದೃಷ್ಟಿಯಿಂದ ನೋಡುವನು )

**ಸಿಕಂದರ:-** ( ಪುರುವನ್ನು ಕುರಿತು, ) ಹೋಗಿರಿ! ನಿಮ್ಮನ್ನು ಸ್ವತಂತ್ರರನ್ನಾಗಿ ಮಾಡಿದೆ. ನಿಮ್ಮ ಪುತ್ರನನ್ನೂ, ನಿಮ್ಮ ಸೈನಿಕರನ್ನೂ ಸಹ ಬಿಡುಗಡೆ ಮಾಡಿದ್ದೇನೆ ಇಷ್ಟೇ ಅಲ್ಲ, ಶೇಲಂ ನದಿಯ ಎಡಬಲಿಗಳಲ್ಲಿರುವ ನಾವು ಗೆದ್ದ ಎಲ್ಲ ರಾಜ್ಯಗಳನ್ನು ನಿಮಗೆ ಕೊಟ್ಟಿದ್ದೇನೆ. ( ಶೆಲುಕ್ಯಸನನ್ನು ಕುರಿತು ) ಶೆಲುಕ್ಯಸ ! ನಾವು ಗೆದ್ದ ಆ ಎಲ್ಲ ರಾಜ್ಯಗಳನ್ನು ಇವರಿಗೆ ಒಪ್ಪಿಸಿರೆಂದು ನಮ್ಮ ಸೈನಿಕರಿಗೆ ಹೇಳಿ ಕಳುಹಿಸು.

( ಶೆಲುಕ್ಯಸನು, "ನಿಮ್ಮ ಆಜ್ಞೆ ಪಾಲಿಸುವೆನು." ಎಂದು ನುಡಿದು ಶಿರಬಾಗಿಸುವನು. )

**ಪುರು:—** ಆದರೆ ನಾನೊಂದು ಮಾತು ಕೇಳಬೇಕೆಂದಿದ್ದೇನೆ.

**ಸಿಕಂದರ:—** ಅವಶ್ಯವಾಗಿ ಕೇಳಬಹುದು

**ಪುರು:—** ಈಗ ನಾವು ನಿಮ್ಮ ಮಾಂಡಲಿಕರೊ ?

**ಸಿಕಂದರಃ—** ( ನಸುನಗುತ್ತ ) ನೀವು, ನಮ್ಮ ಮಾಂಡಲಿಕರಾಗಿಲ್ಲ; ಮಿತ್ರರಾಗಿರುವಿರಿ.

**ಅಂಭಿರಾಜಃ—** ( ಎದ್ದು ನಿಂತು ) ಮಹಾರಾಜ ! ನಾನೊಂದು ಮಾತು ಕೇಳಬೇಕೆಂದಿದ್ದೇನೆ.

**ಸಿಕಂದರ:—** ( ನಸುನಗುತ್ತ ) ಬಹಳ ಸಂತೋಷ.

**ಅಂಭಿರಾಜ:**— ಪುರುರಾಜನು, ನಮ್ಮ ವೈರಿಯಾಗಿರುವದು ನಿಮಗೆ ಗೊತ್ತಿರಬಹುದು.

**ಸಿಕಂದರ:** — ರಾಜಾಸಾಹೇಬ,"ಪುರು"ಹಿಂದುಸ್ಥಾನದಲ್ಲಿಯ ನನ್ನ ಎಲ್ಲ ಮಿತ್ರರಲ್ಲಿಯೇ ಅವನು ಅಗ್ರಗಣ್ಯನು ( ಕೆಳಗಿಳಿದು ತನ್ನ ಕೈಯನ್ನು ಪುರುರಾಜನ ಕಡೆಗೆ ಮುಂದೆ ಮಾಡಿ) ಪುರುರಾಜ! ಇಂದು ನಾನು ಎರಡನೇಯ ಸಲದ ಮಿತ್ರತ್ವದ ಕೈಯ್ಯನ್ನು ತಮ್ಮ ಕಡೆಗೆ ನೀಡಿದ್ದೇನೆ. (ಪುರು ಸಿಕಂದರನ ಕಡೆಗೆ ನೋಡುವನು. ಸಿಕಂದರನು ನಸುನಗುವನು. "ಪುರು"ಸಿಕಂದರನ ಕೈ ಹಿಡಿದು ನಗುವನು:—)

**ಪುರು:**— ಸ್ನೇಹ ಹಸ್ತವನ್ನು ಯಾವಾಗಲೂ ಸ್ನೇಹ ಹಸ್ತದಿಂದಲೇ ಹಿಡಿಯುವೆನು.

**ಸಿಕಂದರ:**—ನಮ್ಮ ನಿಯಮ ಹೀಗಿರುವದು. ಯಾವದೇ ವಸ್ತುವನ್ನಾಗಲೀ ಮನುಷ್ಯನನ್ನಾಗಲೀ, ಶ್ರೇಷ್ಠವೆಂದು ಎಂದು ಒಪ್ಪಿಕೊಳ್ಳುವೆವೋ ಅಂದು ಆ ವಸ್ತು ಅಥವಾ ಮನುಷ್ಯನನ್ನು ನಮ್ಮ ಹೆಸರಿನಿಂದ ಕರೆಯುವೆವು. ಆದ್ದರಿಂದ ನಿಮ್ಮ ಹೆಸರು ಮಹಾರಾಜಾ" ಪೋರಸ್" ಆಗುವದು. ಯುನಾನದ ಇತಿಹಾಸದಲ್ಲಿ ಇದೇ ಹೆಸರಿನಿಂದ ನಿಮ್ಮನ್ನು ಸ್ಮರಿಸುವೆವು. ಇದನ್ನು ನೀವು ಒಪ್ಪಿಕೊಳ್ಳುವಿರಾ ?

**ಪುರು:**— ಇದರಿಂದ ನಮಗಾವ ಹಾನಿಯೂ ಇಲ್ಲ. ಆದರೆ ನಾವೂ ಕೂಡ ನಿಮ್ಮ ಹೆಸರನ್ನು " ಅಲೆಕ್ಝೆಂಡರ " ಹೆಸರಿನಿಂದ ಕರೆಯುವೆವು. ನಮ್ಮ ದೇಶದ ರೂಢಿಯಲ್ಲಿ, ನಿಮ್ಮ ಸ್ಮರಣೆಯ ಕಾಲಕ್ಕೆ ಇದೇ ಹೆಸರನ್ನು ಬಳಸಬೇಕೆಂದು ಆಜ್ಞೆ ಮಾಡುವೆನು. ಯಾಕೆಂದರೆ ಇದು ಸಂಸ್ಕೃತ ಶಬ್ದವಿರುವದು. ಮತ್ತು ನಿಮಗೆ ಯೋಗ್ಯವೂ ಇರುವದು.

**ಸಿಕಂದರ:**— ( ಪ್ರಸನ್ನನಾಗಿ )ಎಲೆಕ್ಝೆಂಡರನನ್ನು ಇರಾಣವು ಸಿಕಂದರನನ್ನಾಗಿ ಮಾಡಿತು, ಹಿಂದುಸ್ಥಾನವು ಸಿಕಂದರನನ್ನು ಅಲೆಕ್ಝೆಂಡರನನ್ನಾಗಿ ಮಾಡಿತು, ಈ ಎರಡೂ ಹೆಸರುಗಳನ್ನು ನಾನು ಮರ್ಯಾದಿಸುವೆನು, ನಾನು ಈ ಸಂಸ್ಕೃತದ ಸುಂದರ ಹೆಸರಿಗಾಗಿ ನಿಮಗೆ ಆಭಾರಿಯಾಗಿದ್ದೇನೆ, (ಸಭೆಯನ್ನು ಕುರಿತು, ಈ ನಮ್ಮ ಮಿತ್ರರ ಮೊದಲನೇ ಬಹುಮಾನವನ್ನು ಸಂತೋಷದಿಂದ ಸ್ವೀಕರಿಸುವೆನು.

**ಪುರು**:— (ಏರುಧ್ವನಿಯಲ್ಲಿ) ಮಹಾರಾಜಾ ಅಲೆಕ್ಝಾಂಡರರಿಗೆ ಜಯವಾಗಲಿ!

(ದರ್ಬಾರದ ಜನರು ಏಕಕಂಠದಿಂದ) ಮಹಾರಾಜಾ ಅಲೆಕ್ಝಾಂಡರರಿಗೆ ಜಯವಾಗಲಿ!

(ಸಮರ ಸುಮ್ಮನಿರುವನು, ಪುರು ಕ್ರೋಧ ದೃಷ್ಟಿಯಿಂದ ಒಮ್ಮೆಲೇ ನೋಡುವನು. ಆಗ ಸಮರನು ತನ್ನ ತಪ್ಪನ್ನು ತಿದ್ದಿಕೊಂಡು ಹೀಗನ್ನುವನು:—)

**ಸಮರ**:— ಮಹಾರಾಜಾ ಅಲೆಕ್ಝಾಂಡರರಿಗೆ ಜಯವಾಗಲಿ!

**ಸಿಕಂದರ**:—(ನಿಧಾನವಾಗಿ,ಒಂದೊಂದು ಶಬ್ದದಮೇಲೆ ಜೋರುಕೊಟ್ಟು) ಪುರುಷ ಪುತ್ರ ಮಹಾರಾಜ ಪೋರಸರಿಗೆ ಜಯವಾಗಲಿ!

**ದರ್ಬಾರದವರು**:— (ಅಂಭಿರಾಜನನ್ನುಳಿದು) ಪುರುಷ ಪುತ್ರ ಪೋರಸ್‌ರಿಗೆ ಜಯವಾಗಲಿ!

**ಸಿಕಂದರ**:— ಮಹಾರಾಜಾ ಅಂಭೀಸ! ನೀವು ನಮ್ಮ ಮಿತ್ರರ ಜಯಕಾರದಲ್ಲಿ ಧ್ವನಿ ಗೂಡಿಸಲಿಲ್ಲ, ನನ್ನೊಬ್ಬ ಮಿತ್ರನು, ಮತ್ತೊಬ್ಬ ಮಿತ್ರನ ವೈರಿಯಾಗಿರುವದು ನನಗೆ ಬೇಕಾಗಿಲ್ಲ, ನೀವೂ ಅನ್ನಿರಿ ಪುರುಷ ಪುತ್ರ ಮಹಾರಾಜ ಪೋರಸ್‌ರಿಗೆ ಜಯವಾಗಲಿ!

**ಅಂಭಿರಾಜ**:— (ಹಿಂಜರಿಯುತ್ತ) ಪುರುಷ ಪುತ್ರ ಮಹಾರಾಜ ಪೋರಸರಿಗೆ ಜಯವಾಗಲಿ !

**ಸಿಕಂದರ**:— ಶೆಲ್ಯುಕ್ಯಸ !

**ಶೆಲ್ಯುಕ್ಯಸ**:— ( ಮುಂಡೆಬಂದು ) ಮಹಾರಾಜ !

**ಸಿಕಂದರ**:— ಮಹಾರಾಜಾ ಅಂಭೀಸ್‌ರಿಗೆ ನಾವು ಕೊಟ್ಟ ವಚನ ಪೂರ್ತಿಯಾಗಲಿ. ಅವರ ರಾಜ್ಯ ಅವರಿಗಿರಲಿ, ಮಹಾರಾಜ ಅಂಭೀಸ್ ನಮ್ಮ ಹಿಂದುಸ್ಥಾನದ ಮೊಟ್ಟ ಮೊದಲಿನ ಮಿತ್ರರಿದ್ದಾರೆ.

**ಸಮರ**:— ಮೊದಲಿನ ಮಿತ್ರರಲ್ಲ; ಮೊದಲಿನ ದಾಸರಿದ್ದಾರೆ. ದಾಸತ್ವವನ್ನು ಸ್ವೀಕಾರ ಮಾಡಿದವರು ಈಗ ಮಿತ್ರರಾಗಲಾರರು.

**ಅಂಭಿರಾಜ**:— ಹುಷಾರ್ !

(ಎಂದೆನ್ನುತ್ತ ಅಂಭಿರಾಜನು ಒರೆಯಿಂದ ಕತ್ತಿಯನ್ನು ಹೊರಗೆಳೆದು, ಸಮರನ ಮೇಲೆ ಹಲ್ಲೆಮಾಡುವನು. ಸಿಕಂದರನು ತಟ್ಟನೆ ಮುನ್ನುಗ್ಗಿ, ತನ್ನ ತಲವಾರದಿಂದ ಅಂಭಿರಾಜನ ತಲವಾರವನ್ನು

# ದೃಶ್ಯ ೮

ಸ್ಥಳ:— ಸಿಕಂದರನ ಸೈನ್ಯ ಠಾಣೆ ವೇಳೆ:— ಸಾಯಂಕಾಲ

( ಸಿಕಂದರನು, ಅಂಭಿರಾಜ, ಶೆಲ್ಯುಕ್ಯಸ ಯುಮುನೀಸ, ಏರಟಿ ಗಣೇಶ ಇವರೊಡನೆ ಮಾತಾಡುತ್ತ ಪ್ರವೇಶ ಮಾಡುವನು. )

**ಸಿಕಂದರ:**— ಆಯುಷ್ ಆರಾಂಗಳಲ್ಲಿ ಕಾಲ ಕಳೆಯುವ ವೇಳೆ ಮುಗಿಯಿತು. ಈಗ ಹೊಸ ಹೊಸ ರಾಜ್ಯಗಳನ್ನು ಗೆದೆಯಬೇಕಾಗಿದೆ. ಆದಷ್ಟು ತೀವ್ರ ನನ್ನ ಪ್ರತಿಜ್ಞೆಯನ್ನು ಪೂರೈಸಬೇಕಾಗಿದೆ. ಮಹಾರಾಜಾ ಅಂಭೀಸ್! ನೀವು ಯಾವ ಸಹಾಯ ಮಾಡುವಿರಿ ಹೇಳಿರಿ?

**ಅಂಭಿರಾಜ:**— ನಿಮ್ಮ ಆಜ್ಞೆ ಪಾಲಿಸಲು, ನಾನು ಮತ್ತು ನನ್ನ ಪ್ರತಿ ಸೈನಿಕರು ಸದಾ ಸಿದ್ಧರಿರುವೆವು. ನಿಮ್ಮ ದಶೆಯಿಂದ ನಮ್ಮಲ್ಲಿ "ಇಲ್ಲ" ಅನ್ನುವ ಮಾತೇ ಇಲ್ಲ.

**ಸಿಕಂದರ:**— ನನಗೆ ಸಂತೋಷವಾಯಿತು.

(ಮಹಾರಾಜಾ ಪುರು ಮತ್ತು ಸಮುರರು ಪ್ರವೇಶ ಮಾಡುವರು )

**ಸಿಕಂದರ:**— ಮಹಾರಾಜಾ ಪೋರಸ ! ನಾನೀಗ ಮುಂದಿನ ರಾಜ್ಯದ ಮೇಲೆ ದಾಳಿ ಮಾಡಬೇಕೆಂದಿದ್ದೇನೆ. ಆದ್ದರಿಂದ ನಮಗೆ ನೀವೇನು ಸಹಾಯ ಮಾಡುವಿರಿ ?

**ಪುರು:**— ನೀವು ಕೇಳಬಾರದಿತ್ತು. ನನ್ನ ಉತ್ತರದಿಂದ ನಿಮಗೆ ನಿರಾಶೆಯಾಗುವದು.

**ಸಿಕಂದರ:**— ಅಂದರೇನು, ನೀವು ನಮಗೆ ಸಹಾಯ ಮಾಡುವದಿಲ್ಲವೆ? ನೀವು ನಮ್ಮ ಸ್ನೇಹಿತರಿರುವಿರಿ.

**ಪುರು:**— ನಾನು ನಿಮ್ಮ ಸ್ನೇಹಿತನಿರುವದು ನಿಜ. ಆದರೆ ನಾನು ನನ್ನ ದೇಶದ ಶತ್ರು ಆಗಿರುವದಿಲ್ಲ. ದೇಶ ಮೊದಲು ಸ್ನೇಹ ನಂತರ.

**ಸಿಕಂದರ:**— (ಸಿಟ್ಟಿನಿಂದ) ನೀವೇನನ್ನುವಿರಿ ಮಹಾರಾಜ ?

**ಪುರು:**— ಮಹಾರಾಜ! ನಿಮ್ಮ ಕೆಂಪು ಕಣ್ಣುಗಳನ್ನು ನಮಗೆ ತೋರಿಸ ಬೇಡಿರಿ. ಕೆಂಪು ಕಣ್ಣುಗಳನ್ನು ನೋಡುವ ರೂಢಿ ನಮಗಿಲ್ಲ. ನಾವು ನಿಮ್ಮ ಮಿತ್ರತ್ವವನ್ನು ಮುಟ್ಟಿರುವೆವು, ದಾಸ್ಯತ್ವವನ್ನು ಮುಟ್ಟಿಲ್ಲ. ಈ ನಿಮ್ಮ ನಡತೆಯನ್ನು ನಿಮ್ಮ ನೌಕರರ ಮೇಲೆ ನಡೆಸಿರಿ. ನಿಮ್ಮ ಎದುರು ನಿಂತು ಪುನಃ ಪುನಃ ಶರಣು ಮಾಡುವ ವನ ಮೇಲೆ ನಡೆಸಿರಿ.

**ಸಿಕಂದರ:**— (ಮೃದುವಾಗಿ) ಮಹಾರಾಜ! ನನ್ನ ಇಚ್ಛೆಯು, ನಿಮ್ಮ ಅಪಮಾನ ಮಾಡಬೇಕೆಂದಿಲ್ಲ. ನಿಮ್ಮ ಸಹಾಯ ಬೇಕೆಂದಿದೆ.

**ಪುರು:**— (ಮೃಧುವಾಗಿ) ಸ್ವಲ್ಪ ಶಾಂತ ಚಿತ್ತದಿಂದ ನೀವೇ ವಿಚಾರ ಮಾಡಿರಿ. ಯಾವದೇ ದೇಶಭಕ್ತನು, ತನ್ನ ದೇಶ ಸೋಲಲಿ. ಎಂದು ಎಂದಾದರೂ ವಿಚಾರ ಮಾಡುವನೇ ? ನಿಮಗೆ ಸಹಾಯ ಮಾಡು ವದರ ಅರ್ಥವೇನು ?

**ಸಿಕಂದರ:**— (ಸಂತೋಷಿತನಾಗಿ) ಈ ನಿಮ್ಮ ಉತ್ತರವು ನಮಗೆ ನಿಃಶ ರನ್ನಾಗಿ ಮಾಡುವದು. ಆದರೂ ನಿಮ್ಮಿಂದ ನನಗೆ ಸಂತೋಷ ವಾಯಿತು. (ಶೆಲ್ಯುಕ್ಯಸನ ಕಡೆ ಹೋಗುವನು)

**ಪುರು:**— ನಿಮ್ಮ ಜೀವನಕ್ಕಾಗಿ ನಾವು, ದೇವರಲ್ಲಿ ಪ್ರಾರ್ಥಿಸೆವು

**ಸಿಕಂದರ:**— (ಹೊರಳಿ) ಪ್ರಾರ್ಥನೆ; ನನ್ನ ಜೀವನಕ್ಕಾಗಿ ಬೇಡ, ನನ್ನ ಗೆಲುವಿಗಾಗಿ ಬೇಕು. ನಮಗೆ ಜೀವ ಬೇಕಾಗಿಲ್ಲ, ಗೆಲುವು ಬೇಕು. ಜೀವನಗಳು ಯುನಾನದಲ್ಲಿ ಬಹಳಿವೆ. ಪ್ರಾರ್ಥನೆ ಮಾಡುವದಾ ದರೆ ನಮ್ಮ ಗೆಲುವಿಗಾಗಿ ಮಾಡಿರಿ.

**ಪುರು:**— ಅದು ಶಕ್ಯವಿಲ್ಲ. ಯಾಕಂದರೆ; ನಿಮ್ಮ ಗೆಲುವು ನಮ್ಮ ದೇಶವ ಸೋಲು, ಇರುವದು. ಯಾರು ತಮ್ಮ ದೇಶ ಸೋಲಲಿ, ಎಂದು ಪ್ರಾರ್ಥನೆ ಮಾಡುವರೋ ಅವರು ಮನುಷ್ಯರಲ್ಲ. ಮನುಷ್ಯವರ್ಗದ ಪಶು ಇರುವರು.

**ಅಂಭಿರಾಜ:**— ಪುರುರಾಜ! ನೀವು ನಮಗೆ ಬುದ್ಧಿಪೂರ್ವಕ ಅಪಮಾನ ಮಾಡುತ್ತಿರುವಿರಿ. ಮೇಲಿಂದ ಮೇಲೆ ಈ ಪ್ರಸಂಗ ಬರುವದು ಬೇಡ! ಒಮ್ಮೆ ಅದರ ನಿರ್ಣಯವಾಗಲಿ. ತೆಗೆಯಿರಿ ನಿಮ್ಮ ಕಠಾರಿ

ಯನ್ನು. ನಿಮ್ಮ ಬಾಹುಬಲದ ಪ್ರಭಾವವನ್ನು ಒಮ್ಮೆ ನೋಡಿ ಯಾದರೂ ನೋಡೋಣ!

**ಪುರು:**— (ಕಠಾರಿಯ ಮೇಲೆ ಕೈಯಿಟ್ಟು) ನಮ್ಮ ನೆರೆಯವನ ಮೈಯ ಲ್ಲಿಯ ರಕ್ತ ಪೂರ್ತಿ ತಣ್ಣಗಾಗಿರದೆ, ಅದರ ಬಿಸಿ ಇನ್ನೂ ಸ್ವಲ್ಪ ಶಿಲ್ಕು ಉಳಿದಿರುವದನ್ನು ನೋಡಿ ನನಗೆ ಸಂತೋಷವಾಯಿತು. ನಿಮ್ಮ ಆಹ್ವಾನವನ್ನು ನಾನು ಸದಾ ಸ್ವೀಕರಿಸುವೆನು. ಬನ್ನಿರಿ!

(ಅಂಭಿರಾಜ ಮತ್ತು ಪುರುರಾಜರು ಒರೆಯಿಂದ ಕಠಾರಿಯನ್ನು ಹಿರಿದು ಒಬ್ಬರ ಮೇಲೊಬ್ಬರು ಏರಿ ಹೋಗುವರು. ಆಗ ಸಿಕಂದರನು ತಟ್ಟನೆದ್ದು ಬಂದು ಇಬ್ಬರ ನಡುವೆ ನಿಲ್ಲುವನು. ಮತ್ತು ಹೀಗನ್ನುವನು -)

**ಸಿಕಂದರ:**— ಯಮುನೀಸ! ನೀನು, ನೀರಲ್ಲಿ ಬಿದ್ದರೂ ತಂಣಗಾಗದ ಬೆಂಕಿಯನ್ನು ನೋಡಿರುವಿ ಏನು? ಬೆಂಕಿಯಲ್ಲಿ ಬಿದ್ದರೂ ಕರಗದ ಕಬ್ಬಿಣ ಕಂಡಿರುವಿ ಏನು? ನೋಡಿರದಿದ್ದರೆ; ನಮ್ಮ ಮಿತ್ರ ಪೋರ ಸನನ್ನು ನೋಡು. ಇವರು ಎಂಥ ಬಿರುಗಾಳಿ ಬೀಸಿದರೂ ಅದಕ್ಕೆ ಎದೆಗೊಟ್ಟು, ಎದುರಾಗಿ ಶಟೆದು ನಡೆಯುವನು (ಪುರು ರಾಜನ ಹೆಗಲ ಮೇಲೆ ಕೈಯಿಟ್ಟು) ಮಹಾರಾಜಾ ಪೋರಸ! ನಿಮಗೆ ವಿನಯ ವಂದನೆಗಳು. (ಅಂಭಿರಾಜನ ಹೆಗಲ ಮೇಲೆ ಕೈಯಿಟ್ಟು) ಮಹಾರಾಜಾ ಅಂಭಿಸ್! ನೀವು ಮತ್ತು ಮಹಾರಾಜಾ ಪೋರ ಸರು ನನ್ನ ಕೈಗಳಿದ್ದಂತೆ. ಒಂದೇ ದೇಹದ ಎರಡೂ ಕೈಗಳು ಪರ ಸ್ಪರ ಬಡದಾಡತೊಡಗಿದರೆ ಆ ದೇಹ ಬದುಕಿ ಬಾಳಬಹುದೆ? ಈ ಘಟನೆಯಿಂದ ನೀವಿಬ್ಬರೂ ಮೇಲಿಂದ ಮೇಲೆ ಬಡಿದಾಡುತ್ತಿ ರುವಿರೆಂದು ನನಗನಿಸುತ್ತದೆ.

**ಅಂಭಿರಾಜ:**— ನಿಜವಿದೆ. ಆದರೆ ತಪ್ಪು ನನ್ನದಿಲ್ಲ. ಪುರುರಾಜನದಿರು ವದು.

**ಸಿಕಂದರ:**— ಮಹಾರಾಜಾ ಅಂಭಿಸ್! ನಾನು ನಿಮ್ಮಿಂದ ಒಂದು ವಸ್ತು ಕೇಳುತ್ತೇನೆ ನಾನು ಏನು ಕೇಳುವೆನೋ ಅದನ್ನು ತಗೊಂಡೇ ತೀರುವೆನು. 'ಇಲ್ಲ' ಎಂಬ ಶಬ್ದ ಕೇಳಲಾರೆ. ಇದು ನಿಮಗೆ ಗೊತ್ತಿದೆ.

**ಅಂಭಿರಾಜ**:— ನಾನು ನಿಮಗಾಗಿ "ಇಲ್ಲ" ಎನ್ನುವದನ್ನು ಕಲಿತಿಲ್ಲ.

**ಸಿಕಂದರ**:— ಹರ್ಷಿತನಾದೆ .... ( ಸ್ವಲ್ಪ ತಡೆದು ) ನಾನು ನಿಮ್ಮ ತಂಗಿಯಾದ ಪ್ರಾರ್ಥನಾಳನ್ನು ಕೇಳುತ್ತೇನೆ.

**ಸಮರ**:— ( ಕಠಾರಿಯ ಮೇಲೆ ಕೈಯಿಟ್ಟು ) ನೀವು ಪ್ರಾರ್ಥನಾಳನ್ನು ಕೇಳುವಿರಾ ?

**ಪುರು**:— ನೋಡಿರಿ ಮಹಾರಾಜ ! ಸ್ನೇಹದ ಪರೀಕ್ಷೆಯನ್ನು ಪುನಃ ಪುನಃ ಮಾಡಬಾರದು. ಪ್ರತಿಯೊಂದು ಮಾತಿಗೂ ಮಿತಿ ಇರುವದು. ಮಿತಿಮೀರಿದರೆ ಮುರಿದು ಹೋಗುವದು.

**ಅಂಭಿರಾಜ**:— ( ಸಿಟ್ಟಿನಿಂದ ) ಏನನ್ನುವಿರಿ ? ನಮ್ಮ ತಂಗಿಯನ್ನು ಕೇಳುವಿರಾ ?

**ಸಿಕಂದರ**:— ( ನಗುತ್ತ ) ಹೌದು, ನಾನು ನಿಮ್ಮ ತಂಗಿ ಪ್ರಾರ್ಥನಾಳನ್ನು ಕೇಳಿದ್ದೇನೆ. ಆದರೆ.... ನನ್ನ ಮಿತ್ರ, ಪೋರಸನ ಪುತ್ರನಾದ ರಾಜಕುಮಾರ ಸಮರನಿಗಾಗಿ. ಅವನು ಆಕೆಯನ್ನು ಆರಿಸಿಕೊಂಡಿದ್ದಾನೆ. ಆಕೆ ಅವನಿಗಾಗಿದ್ದಾಳೆ. ಒಬ್ಬರಿಗೊಬ್ಬರು ಒಪ್ಪಿದ್ದಾರೆ.

( ಮಹಾರಾಜಾ ಪುರು ಮತ್ತು ಸಮರರಿಗೆ ಆನಂದವಾಗುವದು ಆದರೆ ಅಂಭಿರಾಜನು ಆಲೋಚನೆ ಮಾಡತೊಡಗುವನು. )

**ಸಿಕಂದರ**:— ಮಹಾರಾಜಾ ಅಂಭಿಸ ! ನೀವು ವಚನ ಕೊಟ್ಟಿರುವಿ. ಈಗ ನಿಮ್ಮಿಂದ " ಇಲ್ಲ " ಎಂಬ ಶಬ್ದ ಕೇಳಲಾರೆ.

**ಅಂಭಿರಾಜ**:— ಆದರೆ ........

**ಸಿಕಂದರ**:— ನಿಮ್ಮ ತಂಗಿಗೆ, ಇವನಿಗಿಂತ ಉತ್ತಮ ವರನು ಇಡೀ ಹಿಂದುಸ್ಥಾನದಲ್ಲಿಯೇ ದೊರೆಯಲಾರನು. ಎಂದು ಭರವಶೆ ಕೊಡುವೆನು. ನೀವು ಒಪ್ಪಿಕೊಳ್ಳಿರಿ. ನಿಮ್ಮ ಒಪ್ಪಿಗೆಯ ದಾರಿಯನ್ನು ಅವರ ಹೃದಯಗಳು ದಾರೀ ನೋಡುತ್ತಿವೆ.

**ಅಂಭಿರಾಜ**:— ಮಹಾರಾಜಾ ಪುರು; ನಮ್ಮ ಶತ್ರು ಇರುವನಲ್ಲಾ ! ಎಂದು ವಿಚಾರ ಮಾಡುತ್ತಿದ್ದೇನೆ.

**ಸಿಕಂದರ:**— ನೀವು ಒಪ್ಪಿಕೊಂಡರೆ, ಈ ಶರೀರ ಸಂಬಂಧದ ನಂತರ ನಿಮ್ಮ ಶತ್ರುತ್ವ ಅಳಿದು ಹೋಗುವದು.

**ಅಂಭಿರಾಜ:**— ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ. ನಿಮ್ಮ ಮಾತು ಮೀರುವವರು ಈ ಹಿಂದ,ಸ್ಥಾನದಲ್ಲಿ ಯಾರಿರುವರು?

**ಸಿಕಂದರಃ**— (ನಗುತ್ತ) ಯಾರು ಇಲ್ಲೆಂದರೂ, ಒಬ್ಬರಾದರೂ ಇರುವರು. ಅವರು ನಮ್ಮ ಮಿತ್ರ ಮಹಾರಾಜಾ ಪೋರಸ್. (ಸಮರನ ಕಡೆಗೆ ನೋಡಿ) ರಾಜಪುತ್ರ! ನಿಮ್ಮ ವಿಚಾರವೇನು?

(ಸಮರ ಸುಮ್ಮನಿರುವನು. ಪೋರಸ್ ನಗುವನು.)

**ಸಿಕಂದರ:**— (ತಟ್ಟನೆ ತಿರುಗಿ) ಶೆಲುಕ್ಯಸ!

**ಶೆಲುಕ್ಯಸ:**— (ಮುಂದೆ ಬಂದು) ರಾಜಾಧಿ ರಾಜ!

**ಸಿಕಂದರಃ**— ನಾನು ಮುಂದಿನ ರಾಜದಮೇಲೆ ದಾಳಿ ಮಾಡಲು ನಿರ್ಣಯಿಸಿದ್ದೇನೆ. ತಮ್ಮ ತಮ್ಮ ಶಸ್ತ್ರಾಸ್ತ್ರಗಳೊಡನೆ ಸಜ್ಜಾಗಲು ಸೈನಿಕರಿಗೆ ತಿಳಿಸು.

**ಶೆಲುಕ್ಯಸಃ**- ಈಶ್ವರೀ ಕೃಪೆಯಿಂದ ಎಲ್ಲವೂ ಸಿದ್ಧವಿದೆ. ಆದರೆ ಈಗ ಸೈನಿಕರು ಮಾತ್ರ ದಣಿದಿದ್ದಾರೆ ಕಾರಣ........

**ಸಿಕಂದರಃ**— (ಮಧ್ಯದಲ್ಲಿಯೇ ಅವನ ಮಾತು ಮುರಿದು ಸಿಟ್ಟಿನಿಂದ, ತನ್ನ ತೊಡೆಯ ಮೇಲೆ ಕೈ ಹೊಡೆದು) ಅವರು ಸೈನಿಕರಿರುವರು. ಸೈನಿಕರು ದಣಿವು ಬೇಸರಿಕೆಗಳ ವಿಚಾರ ಮಾಡಬಾರದು. ಸೈನಿಕರು ಸೈನಾಧಿಕಾರಿಯ ಆಜ್ಞೆ ಮೀರ ಬಾರದು. ಹಾಗೆ ಮಾಡಿದರೆ ಅವರು ಸಿಸ್ತುಭಂಗ ಮಾಡಿದ ಅಪರಾಧದ ಶಿಕ್ಷೆಗೆ ಗುರಿಯಾಗಬೇಕಾಗುವದು, ಎಂದುಹೇಳು. ಮತ್ತು ಇದು ನಿಮ್ಮ ಅಧಿಕಾರಿಯ ಆಜ್ಞೆಯೆಂದು ಹೇಳು. ಎಲ್ಲವೂ ಸರಿಯಾಗುವದು. (ಸಿಕಂದರನು ಹೊರಟು ಹೋಗುವನು. ಉಳಿದವರು ಅವನ ಹಿಂದಿಂದ ಹೊರಟು ಹೋಗುವರು-)

—*§*—

# ದೃಶ್ಯ ೯

**ಸ್ಥಳಃ—** ಸಿಕಂದರನ ಸೈನ್ಯಠಾಣೆ **ವೇಳೆಃ-** ಸಾಯಂಕಾಲ

(ಸಿಕಂದರನ ಕೆಲ ಸೈನಿಕರು ಒಟ್ಟುಗೂಡಿ ಕೂತಿರುವರು ಅವರು ಸಿಟ್ಟಿನಲ್ಲಿರುವರು ಮತ್ತು ಒಬ್ಬರಿಗೊಬ್ಬರು ಮಾತಾಡುತ್ತಲಿರುವರು)

**೧ನೇ ಸಿಪಾಯಿ:—** ನಾವು ಸೈನಿಕರಿರುವದು ನಿಜ ಸೈನಿಕರು ತನ್ನ ಮೇಲಾಧಿಕಾರಿಯ ಅಪ್ಪಣೆ ಪಾಲಿಸಬೇಕು, ಇದೂ ನಿಜ. ಮೇಲಾಧಿಕಾರಿಯ ಕೆಲಸ, ಆಜ್ಞೆ ಮಾಡುವದು. ಸೈನಿಕರ ಕೆಲಸ, ಆಜ್ಞೆ ಪಾಲಿಸುವದು ಇದೂ ನಿಜ. ಆದರೆ ಸೈನಿಕರು ಪಶುವಲ್ಲ ಮಾನವರಿರುವರು. ಪ್ರತಿ ಮಾನವನಿಗಿರುವ ಸುಖ ಸಂತೋಷಗಳ ಬೇಡಿಕೆ ಅವರಿಗೂ ಇರುವದು.

**೨ನೇಸಿಪಾಯಿ:—** ನೀನನ್ನುವದು ನಿಜವಿದೆ ಮಿತ್ರಾ! ನಾವು ಪಶು ಅಲ್ಲ.

**೩ನೇ ಸಿಪಾಯಿ:—** ನಾವು ಪಶು ಅಲ್ಲದಿದ್ದರೂ, ಪಶು ಆಗುತ್ತಿದ್ದೇವೆ. ಪಶುಗಳನ್ನಾಗಿ ಮಾಡುತ್ತಿದ್ದಾರೆ. ಈ ಯುದ್ಧದಲ್ಲಿ ಪೋರಸನು ನಮ್ಮ ಅರ್ಧ ಸೈನಿಕರನ್ನು ಕೊಂದಿದ್ದಾನೆ. ಉಳಿದರ್ಧ ಸೈನಿಕರ ಧೈರ್ಯವನ್ನೇ ಕಸಿದುಕೊಂಡಿದ್ದಾನೆ. ಪಶುಗಳಂತೆ ಸಾಯುವವರು ನಾವು, ಶೂರರೆಂದು ಬಿರುದು ಪಡೆಯುವವರು ಅಧಿಕಾರಿಗಳು

**೪ನೇ ಸಿಪಾಯಿ:—** ಪೋರಸನ ಪರಾಕ್ರಮದ ಚಿತ್ರ ಎದ್ಯಾಗ ಮೂಡೈತಿ. ಪೋರಸ ಅಂದರ ನಮಗ ಭಯಾ ಬರತೈತಿ

**೧ನೇ ಸಿಪಾಯಿ:—** ಸ್ವತಃ ನಮ್ಮ ಬಾದಶಹನೇ ಹೆದರುತ್ತಿರುವಾಗ ನಮ್ಮ ಗತಿಯೇನು ? ಹೆದರದಿದ್ದರೆ ಆ ದಿವಸ ದರ್ಬಾರದಲ್ಲಿ ಪೋರಸನ ಕೂಡ ನಮ್ಮ ಬಾದಶಹ, ನಡಕೊಂಡ ರೀತಿನೋಡಿದ್ರ ಯಾರು ಸೋತರೂ, ಯಾರು ಗೆದ್ದರೂ, ಅನ್ನೋದ ಗೊತ್ತಾಗುವಂತಿರಲಿಲ್ಲ.

**೨ನೇ ಸಿಪಾಯಿ:—** ಮುತ್ತಿನಂಥಾ ಮಾತ ಮಾತಾಡಿದಿ ನೋಡು !

೪ನೇ ಸಿಪಾಯಿ:— ಅವತ್ತ ತುಂಬಿದ ಸಭ್ಯಾಗ ಪೋರಸ ಎಂಥೆಂಥಾ ಮಾತ ಮಾತಾಡಿದಾ? ಪೋರಸ್ ಏನ ಅಂದರೂ, ಅವನ್ನ ತನ್ನ ತಾಯಿ ಹಾಲು ಕುಡಿದಂಗ ತಂಣ್ಣಗ ಕುಡಿದು ಸುಮ್ಮಸಿದ್ದಾ. ನಮ್ಮ ಬಾದಶಹಾಗ ಸಿಟ್ಟs ಬರಲಿಲ್ಲ. ಸಿಟ್ಟಿನ ಬದಲಾಗಿ ಮ್ಯಾಲಿ ಮ್ಯಾಲೆ ನಗಿ ಬರತಿತ್ತು.

೩ನೇ ಸಿಪಾಯಿ:— ನಮ್ಮ ಹಕೀಮು ನಮ್ಮೊಂದ ನಾಲ್ವತ್ತುಸಾವಿರ ಸಿಪಾಯರಿಗೆ ಮನಿಗೆ ಹೋಗಾಕ ಸೂಟಿ ಕೊಟ್ಟಾರಂತ ಹೇಳಿದಾ. ಕರೆ ಅನಪಾ !

೧ನೇ ಸಿಪಾಯಿ:-- ಅದೆಲ್ಲಾ ಸುಳ್ಳು. ಯುದ್ಧದಲ್ಲಿ ಅವರೆಲ್ಲ ಸತ್ತಿದ್ದಾರೆ. ಸತ್ತರೆಂದು ಹೇಳಿದರೆ ನಮ್ಮ ಸೈನಿಕರು ಹೆದರತಾರಂತ ಹಾಗ ಹೇಳ್ಯಾರ.

೪ನೇ ಸಿಪಾಯಿ:- ನಾ ಹಿಂಗ ಕೇಳೀನಿ ಅವತ್ತು; ಇಕಡೆ ದರ್ಬಾರ ನಡದಾಗ, ಆಕಡೆ ನಮ್ಮ ಸೈನಿಕರ ಶ್ರವಾನ ಹಿಂದೂ ಸೈನಿಕರ ಶ್ರವದ ಕೂಡ ಸುಟ್ಟುಬಿಟ್ಟರಂತೆ

೨ನೇ ಸಿಪಾಯಿ:--- ಖರೆ ಐತಿ ಅದು.

೧ನೇ ಸಿಪಾಯಿ:— ಇಷ್ಟೇಕೆ ಹೇಳಬೇಕಿವರು? ನಾಳೆ; ನಾವು ಸತ್ತರೂ ನಮ್ಮ ಹೆಸರ ಕಾಟ ಹಾಕಿ, ಇವರಿಗೆ ಮನಿಗೆ ಹೋಗಾಕ ಸೂಟಿ ಕೊಟ್ಟೈತಿ ಎಂದು ಹೇಳುವವರನ್ನು ?

೩ನೇ ಸಿಪಾಯಿ:— ನಾವು ಇನ್ಮುಂದ ಯುದ್ಧ ಮಾಡುವದಿಲ್ಲ. ನಮ್ಮನ್ನು ನಮ್ಮ ಮನಿಗೆ ಕಳಸಿಕೊಡಿರಿ. ಎಂದು ಯಾಕೆ ಕೇಳಬಾರದು ?

೧ನೇ ಸಿಪಾಯಿ:— ನಿನ್ನ ಮಾತು ಅಗದಿ ಬರೋಬರಿ ಐತಿ.

೪ನೇ ಸಿಪಾಯಿ:— ನಮ್ಮನ್ನು ಕಳಿಸಿಕೊಡದಿದ್ದರೆ ?

೧ನೇ ಸಿಪಾಯಿ:— ಅವರ್ಯಾಕ ಕಳಿಸಾಕ ಬೇಕು? ನಾವೇ ಸ್ವತಃ ಹೋಗುವೆವು. ನಮ್ಮನ್ನು ಯಾರೂ ತಡೆಯರು. ಒಂದು ವೇಳೆ ಯಾರಾದರೂ ತಡೆದರೆ, ಅವರು ಈ ಭೂಮಿಯ ಮೇಲೆ ಉಳಿಯರು. ಇದು ನಮ್ಮ ಕೊನೆಯ ನಿರ್ಣಯ.

(ಒಬ್ಬ ಸಿಪಾಯಿಯು ಸಂತೋಷದಿಂದ ಬರುವನು. ಅವನು ಹೀಗನ್ನುವನು.)

ಸಿಪಾಯಿ:— ಅಲಾಯಿವರಃ ಇಲ್ಲೇ ಕುಂತ್ಬಿಟ್ಟೇರಲ್ಲಾ ! ಅಲ್ಲಿ ನಾಚ ನಡದೈತಿ ನೀವೆಲ್ಲ ಇಲ್ಲಿ ಕೂತ್ಬಿಟ್ಟೇರಲ್ಲ. ಎಲ್ಲಾ ಸೈನಿಕರು ಅಲ್ಲೇ ಕೂಡ್ಯಾರ, ನಡಿರಿ, ನಡಿರಿ, ಹೋಗೂನ ನಡಿರಿ.

(ಎಲ್ಲರೂ ಹುಡುಗಾಟಿಕೆ ಮಾಡುತ್ತ ಹೊರಟು ಹೋಗುವರು )

—†‡‡†—

## ದೃಶ್ಯ ೧೦

**ಸ್ಥಳ:**— ಸಿಕಂದರನ ಸೈನ್ಯಠಾಣೆ. **ವೇಳೆ:**— ಸಾಯಂಕಾಲ

(ರುಕ್ಸಾನಳು ಸೈನಿಕರ ಮುಂದೆ ಭಾಷಣ ಮಾಡುತ್ತಿರುವಳು ಎಲ್ಲ ಸಿಪಾಯಿಯರು ಲಕ್ಷ್ಯಕೊಟ್ಟು ಕೇಳುತ್ತಿರುವರು.)

**ರುಕ್ಸಾನಾ:**— ನೀವು ಕೇವಲ ಸೈನಿಕರೇ ಇಲ್ಲ, ಸಂಸಾರಿಗರೂ ಇರುವಿರಿ. ನಿಮಗೆ ಹೆಂಡರೂ,ಮಕ್ಕಳೂ, ತಂದೆತಾಯಿಗಳೂ ಇರುವರು. ಅಕ್ಕ ತಂಗಿಯರೂ ಅಣ್ಣತಮ್ಮಂದಿರೂ, ಸಹ ಇರುವರು. ನಿಮ್ಮನ್ನವ ಲಂಬಿಸಿದವರ ನಿದ್ರೆಯು, ನಿಮ್ಮನ್ನು ನೋಡುವ ಹಂಬಲದಲ್ಲಿ ಹಾರಿ ಹೋಗುತ್ತಲಿದೆ ಇಂದು ಬರಬಹುದು. ನಾಳೆ ಬರಬಹುದೆಂದು ಆಶೆಯಿಂದ ದಿನಗಳೆಯುತ್ತಿದ್ದಾರೆ.

(ಸಿಪಾಯರು ಒಬ್ಬರ ಮುಖ ಒಬ್ಬರು ನೋಡತೊಡಗುವರು.)

**೧ನೇ ಸಿಪಾಯಿ:**— ಖರೆ ಐತಿ.

**೨ನೇ ಸಿಪಾಯಿ:**— ಬಹಾಳ ಬರೋಬರಿ ಐತಿ.

**ರುಕ್ಸಾನಾ:**— ಬಾದಶಹನ ಮರ್ಜಿಯಂತೆ ನಡೆಯುವದು ಸೈನಿಕರ ಕರ್ತವ್ಯವೆಂದು ನೀವನಬಹುದು. ಅದನ್ನು ನಾನೂ ಒಪ್ಪುತ್ತೇನೆ. ಆದರೆ ಸೈನಿಕರ ಬಯಕೆಯನ್ನು ಪೂರೈಸುವದು ಬಾದಶಹನ ಕರ್ತವ್ಯ. ಈಗ ಸೈನಿಕರಾದ ನೀವು, ನಿಮ್ಮ ಕರ್ತವ್ಯ ಮುಗಿಸಿರು ವಿರಿ. ಬಾದಶಹನ ಕರ್ತವ್ಯ ಬಾಕಿ ಉಳಿದಿದೆ. ಅವರದನ್ನು ಮಾಡಿ ಕೊಡಲಿ.

(ಹಿಂದಿನ ದೃಶ್ಯದ ಸಿಪಾಯಿಯರು ಬಂದು ಕೂಡಿಕೊಳ್ಳುವರು)

ರುಕ್ಸಾನಾ:— ನೀವು ಮುಂದಿನ ರಾಜ್ಯಗಳ ಮೇಲೆ ದಾಳೀ ಮಾಡುವದರಿಂದ ನಿಮಗೆಷ್ಟು ಕೇಡಾಗುವದು! ನಿಮಗೆ ಗೊತ್ತಿಲ್ಲ. ಮುಂದಿನ ರಾಜ್ಯಗಳ ಮೇಲಿ ದಾಳಿ ಮಾಡಿದ್ದೇ ಆದರೆ, ನಿಮಗಾಗಿ ನಿಮ್ಮ ಸಂಕಟವೂ ವಿನಾಶವೂ ಕಾದು ಕೂತಿದೆ, ಎಂದು ತಿಳಿಯಿರಿ. ನನ್ನ ಮೇಲೆವಿಶ್ವಾಸವಿಡಿರಿ, ನನ್ನ ಮಾತು ಕೇಳಿರಿ. ನಾನೀಗಏನು ಹೇಳುವೆನೋ ಅದನ್ನು ನಿಮ್ಮ ಮತ್ತು ನಿಮ್ಮ ದೇಶದ ಹಿತಕ್ಕಾಗಿ ಹೇಳುತ್ತಿದ್ದೇನೆ.ನಿಮಗಾಗಿ ನಿಮ್ಮದೇಶ ಮಾತೆಯ ಸಂದೇಶ ತಂದಿದ್ದೇನೆ. ನಿಮ್ಮದೇಶ ಮಾತೆಯ ಸಂದೇಶವು ನಿಮ್ಮ ಬಾದಶಹನ ಸಂದೇಶಕ್ಕಿಂತಲೂ ಹೆಚ್ಚಿನದು.

(ಸೈನಿಕರು ಒಬ್ಬರನ್ನೊಬ್ಬರು ನೋಡಿ ಮಾತಾಡತೊಡಗುವರು.)

೧ ನೇ ಶಿಪಾಯಿ:— ಬರೋಬರಿ ಐತಿ.

೨ ನೇ ಶಿಪಾಯಿ:— ನೂರಕ್ಕೆ ನೂರು ಖರೇ ಐತಿ

ರುಕಾನಾ:— ನಿಮ್ಮ ವಿನಾಶವನ್ನು ಕಂಡೂ ಕಂಡೂ ಸುಮ್ಮನಿರಬೇಕೋ ಹೇಗೆ? ನಾನು ಇರಾಣದವಳಿದ್ದೇನೆ. ನಿಮ್ಮ ಬಾದಶಹನ ಇಡಿ ಸೈನ್ಯದ ಅರ್ಧ ಜನರು ಇರಾಣದವರಿರುವರು. ಅವರನ್ನು ವಿನಾಶದಿಂದ ಉಳಿಸಿಕೊಳ್ಳುವದು ನನ್ನ ಕರ್ತವ್ಯ. ಅದಕ್ಕಾಗಿ ನಾನು ನಿಮಗೆ ಹೇಳುವೆನು.

೧ ನೇ ಶಿಪಾಯಿ:— ನಾವು ಸೈನಿಕರು! ಸೈನಿಕರಾದ ನಾವು ಏನು ಮಾಡುವೆವು.

೨ ನೇ ಶಿಪಾಯಿ:— ನಮಗೆ ಬೇರಾವ ಉಪಾಯವೇ ಇಲ್ಲ ತಾಯಿ.

೩ ನೇ ಶಿಪಾಯಿ:— ನಮ್ಮ ಮಾತಿಗೆ ಮಹತ್ವವೇ ಇಲ್ಲವಮ್ಮಾ

೪ ನೇ ಶಿಪಾಯಿ:— ಯಾವದೇ ಬಾದಶಹನು ತನಗೆ ತಿಳಿದಿದ್ದನ್ನು, ಬೇಕಾಗಿದ್ದನ್ನೂ ಮಾಡುವನು. ಅವರನ್ನು ಯಾರೂ ತಡೆಯರು.

ರುಕ್ಸಾನಾ:— ನೀವು ಸೈನಿಕರು ಹೌದು. ಸಿಕಂದರನ ಪ್ರತಿಯೊಂದು ಯುದ್ಧವನ್ನು ಸೈನಿಕರೆ ಗೆದ್ದಿರುವರು. ಸಿಕಂದರನೊಬ್ಬನೇ ಯುದ್ಧ

ವನ್ನು ಗೆದಿಯಲಾರ. (೨ನೇಯುವನ ಕಡೆಗೆ ತಿರುಗಿ)ನಿಮಗೆ ಉಪಾಯವಿಲ್ಲವೆಂದು ಯಾರು ಹೇಳುವರು? ಸಿಕಂದರನ ಎಲ್ಲ ಶಕ್ತಿ; ನಿಮ್ಮಿಂದ ದೊರೆತಿದೆ. (೩ನೇಯುವನ ಕಡೆಗೆ ತಿರುಗಿ) ನಿಮ್ಮ ಮಾತಿಗೆ ಮಹತ್ವವಿಲ್ಲವೆಂದು ಯಾರು ಹೇಳುವರು? ಸಿಕಂದರನು ನಿಮ್ಮನ್ನು ಬಿಟ್ಟು ಒಂದು ಹೆಜ್ಜೆಯನ್ನೂ ಮುಂದಿಡನು. (೪ನೇಯುವನ ಕಡೆಗೆ ತಿರುಗಿ) ಯಾವ ಬಾದಶಹನು ತನಗೆ ತಿಳಿದಿದ್ದನ್ನೂ, ಬೇಕಾದದ್ದನ್ನೂ ಮಾಡುವನೋ ಅವನು ಬಾದಶಹನಾಗಿ ಉಳಿಯಲಾರನು

**೪ನೇ ಸಿಪಾಯಿ:—** ತಾಯಿ! ನಮಗೇನೂ ತಿಳಿಯದಾಗಿದೆ, ಏನು ಮಾಡಬೇಕು? ಅದನ್ನು ನೀವೇ ಹೇಳಿ ಬಿಡಿರಿ.

**ರುಕ್ಸಾನಾ:—** ನಿಮ್ಮ ಬಾದಶಹನಿಗೆ ಅಪಮಾನ ಮಾಡಬಾರದು. ಬಾದಶಹನಿಗೆ ಅಪಮಾನ ಮಾಡುವದೆಂದರೆ; ದೇಶಕ್ಕೆ ಅಪಮಾನ ಮಾಡಿದಂತೆ. ಆದರೆ ಅವನಿಗೆ ಇಷ್ಟೇ ಹೇಳಿರಿ! ಮುಂದಿನ ದಾಳಿಯಲ್ಲಿ ನಾವು ಯುದ್ಧ ಮಾಡಲಾರೆವು. ನಮಗೆ ಮನಿಗೆ ಹೋಗಲು ಅಪ್ಪಣೆ ಕೊಡಿರಿ. ಎಂದು ಕೇಳಿರಿ. ನಿಮಗೆ ಮನೆಗೆ ಹೋಗುವ ಅಪ್ಪಣೆ ನಿಶ್ಚಯವಾಗಿ ದೊರೆಯುವದು. ಆದರೆ ಈ ವಿಷಯದಲ್ಲಿ ಸಿಟ್ಟಿಗೆ ಒಳಗಾಗಬಾರದು. ಶಾಂತ ರೀತಿಯಿಂದಿರಬೇಕು ಸಿಟ್ಟು ಮಾನವನನ್ನು ವಿನಾಶಕೊಯ್ಯುವದು. ಶಾಂತಿ ಉನ್ನತಿಯತ್ತ ಒಯ್ಯುವದು.

**೧ನೇ ಸಿಪಾಯಿ—:** ತಾಯಿಯವರು ನಿಜವನ್ನೇ ಹೇಳುವರು. ನಾವು ಶಾಂತಿಯಿಂದ ನಮ್ಮ ಬೇಡಿಕೆಗಳನ್ನು ಕೇಳಬೇಕು.

**ರುಕ್ಸಾನಾ:—** ಹಾಗಾದರೆ ಅನ್ನಿರಿ! ನಾವು ಮನಿಗೆ ಹೋಗಬೇಕೆನ್ನುತ್ತೇವೆ.

**ಎಲ್ಲ ಶಿಪಾಯರು:—** ನಾವು ಮನಿಗೆ ಹೋಗಬೇಕೆನ್ನುತ್ತೇವೆ.

**ರುಕ್ಸಾನಾ:—** ಇನ್ನು ಮೇಲೆ ನಾವು ಯುದ್ಧ ಮಾಡಲಾರೆವು.

**ಎಲ್ಲ ಶಿಪಾಯಿಗಳು:—** ನಾವು ಯುದ್ಧ ಮಾಡಲಾರೆವು

**ರುಕ್ಸಾನಾಃ**— ಈಗ ಹೋಗಿರಿ! ನಿಮ್ಮ ವಿಚಾರವನ್ನು ನಿಮ್ಮ ಬಾದಶಹನ ಮುಂದೆ ಹೇಳಿರಿ. ಅವರು ನಿಮ್ಮ ಮಾತನ್ನು ಮಾನ್ಯ ಮಾಡುವರು.

**ಎಲ್ಲಶಿಪಾಯಿಯರುಃ**— ನಾವು ಯುದ್ಧ ಮಾಡಲಾರೆವು! ನಾವು ನಮ್ಮ ಮನೆಗೆ ಹೋಗುವೆವು. (ಎಂದು ಅನ್ನುತ್ತ ಗದ್ದಲ ಮಾಡುತ್ತ ಹೊರಟು ಹೋಗುವರು,)

—*†‡†*—

## —:ಒಳನೋಟ:—

ಸ್ಥಳಃ— ಸಿಕಂದರನ ಸೈನ್ಯ ಠಾಣೆ,

(ಸೈನಿಕರು ಗದ್ದಲ ಮಾಡುತ್ತ ಬರುವರು. ಮತ್ತು ನಾವು ಯುದ್ಧ ಮಾಡಲಾರೆವು! ನಮಗೆ ಮನಿಗೆ ಹೋಗಲು ಅಪ್ಪಣೆ ಕೊಡಿರಿ ನಾವು ಯುದ್ಧ ಮಾಡಲಾರೆವು! ಎಂದು ಅನ್ನುತ್ತಲಿರುವರು. ಸಿಕಂದರನು ತನ್ನ ಡೇರೆಯಿಂದ ಹೊರಗೆ ಬರುವನು. ಸೈನಿಕರು ಶಾಂತರಾಗುವರು, ಅವನ ಸಂಗಡ ಶಲುಕ್ಯಸ ಮತ್ತು ಯಮುನೀಸರು ಸಹ ಇರುವರು.)

**ಶೆಲುಕ್ಯಸ ಮತ್ತು ಯುಮುನೀಸ**:— (ದೊಡ್ಡ ಧ್ವನಿಯಿಂದ) ಅಲೆಕ್ಝಾಂಡರ ಜಿಂದಾಭಾದ!

**ಕೆಲಶಿಪಾಯಿಗಳುಃ**— ಅಲೆಕ್ಝಾಂಡರ ಜಿಂದಾಬಾದ!

**ಸಿಕಂದರಃ**— (ಸಿಪಾಯಿಯರೆಲ್ಲರನ್ನು ಸೂಕ್ಷ್ಮದೃಷ್ಟಿಯಿಂದ ನೋಡಿ) ಈ ದಿವಸ ನಿಮ್ಮಲ್ಲಿಯ ರಾಜನಿಷ್ಠೆ, ಕರ್ತವ್ಯ ನಿಷ್ಠೆಗಳು ನಿಮ್ಮಿಂದ ಮಾಯವಾದವೆ? ನಿಮ್ಮ ಬಾಯಿಂದ ನಿಮ್ಮ ಬಾದಶಹನ ಜಯ ಜಯಕಾರ ಹೊರಡದಷ್ಟು ಸಿಟ್ಟು ಬಂದಿದೆ ಏನು ನಿಮಗೆ?

(ಸೈನಿಕರು ಸುಮ್ಮನಿರುವರು)

**ಸಿಕಂದರಃ**— ನಮ್ಮ ಸೈನಿಕ ಗೆಳೆಯರೇ! ನಿಮ್ಮಿಂದ ಈ ವರೆಗೆ ರಾಜ ನಿಷ್ಠೆಯ ಶಬ್ದಗಳನ್ನೇ ನಾನು ಕೇಳುತ್ತಿದ್ದೆ. ಆದರೆ ಇಂದು ನಿಮ್ಮ

ಬಾಯಿಂದ ಸಿಟ್ಟಿನ ಶಬ್ಧಗಳನ್ನು ಕೇಳುತ್ತಿದ್ದೇನೆ. ಈ ನಿಮ್ಮ ಸಿಟ್ಟಿನ ಶಬ್ದಗಳನ್ನು ಕೇಳುವ ಸ್ವಭಾವ ನನಗಿಲ್ಲ. ಹೇಳಿರಿ! ನಿಮಗೇನು ಬೇಕು?

೧ನೇ ಶಿಪಾಯಿ:— (ತೊದಲಿಸುತ್ತ) ನಾವೇನೂ ಕೇಳುವದಿಲ್ಲ.

ಸಿಕಂದರ:— (ಸಿಟ್ಟಿನಿಂದ) ಮೂರ್ಖರ್ಾ ಹುಷಾರಿಯಿಂದ ಮಾತನಾಡು ನಿಮ್ಮ ಬಾದಶಹನಕೂಡ ಮಾತಾಡುವ ಪದ್ಧತಿ ಇದ್ದೇಯೋ? ನಿನಗೆ ನಿಮ್ಮ ಅಧಿಕಾರಿಯು ಹೀಗೆಯೆ ಕಲಿಸಿರುವನೇನು?

೧ನೇ ಶಿಪಾಯಿ:— (ಹೆದರುತ್ತ ಹೆದರುತ್ತ) ನಮಗೇನೂ ಬೇಕಾಗಿಲ್ಲ ಮಹಾರಾಜ!

ಸಿಕಂದರ:— (ನಗುತ್ತ) ನಿಮಗೇನೂ ಬೇಕಾಗಿರದಿದ್ದರೆ, ನನ್ನ ವಿಶ್ರಾಂತಿಯನ್ನೇಕೆ ಕೆಡಿಸಿದಿರಿ? (ಹೊರಳಿ) ಇದು ನನ್ನ ವಿಶ್ರಾಂತಿಯ ವೇಳೆ.

೨ನೇ ಶಿಪಾಯಿ:— (ಧೈರ್ಯದಿಂದ) ನಾವು ಮನೆಗೆ ಹೋಗಬೇಕೆನುತ್ತೇನೆ

ಸಿಕಂದರ:— (ತಿರುಗಿ) ಮನೆಗೆ ಹೋಗುತ್ತೆನೆಂದು, ಅನ್ನುತ್ತಿರುವದು ನಿನಗೊಬ್ಬನಿಗಾಗಿಯೋ?

೩ನೇ ಶಿಪಾಯಿ:— (ಮುಂದೆ ಬಂದು ೨ನೇ ಸಿಪಾಯಿಯ ಕೂಡ ನಿಂತು) ನಾನೂ ಮನೆಗೆ ಹೋಗುತ್ತೇನೆ. ನನ್ನ ಕೂಡ ಇನ್ನೂ ಕೆಲ ಜನರು ಬರುತ್ತೇನೆನ್ನುತ್ತಾರೆ,

ಸಿಕಂದರ:— ನನ್ನ ಸಿಪಾಯಿಯರು, ಹೀಗೆ ಮಾತಾಡುತ್ತಾರೆಂದು ನನಗನಿಸಿರಲಿಲ್ಲ. ಇರಲಿ, ನೀವೀಗ ಅನ್ನುವದಾದರೂ ಏನಿದೆ? ಚೆನ್ನಾಗಿ ಹೇಳಿಬಿಡಿರಿ.

೪ನೇ ಶಿಪಾಯಿ:— (ಮುಂದೆಬಂದು) ನಾವೆಲ್ಲರೂ ನಮ ನಮ ಮನೆಗೆ ಹೋಗಬೇಕೆನ್ನುತ್ತೇವೆ.

೫ನೇ ಶಿಪಾಯಿ:— (ಮುಂದೆಬಂದು) ನಾವು ಮನಿಗೆ ಹೋಗುತ್ತೇವೆ.

(ಸಿಕಂದರನು ಉದಾಸೀನನಾಗುವನು. ಸೈನಿಕರು ಒಬ್ಬರ ಮುಖವನ್ನೊಬ್ಬರು ನೋಡ ತೊಡಗುವರು. ಅವರಲ್ಲೀಗ ಹೆದರಿಕೆ ಉಳಿದಿರುವುದಿಲ್ಲ.)

ಸಿಕಂದರಃ— ನಮ್ಮ ಸೈನಿಕರಲ್ಲಿ ಹೇಡಿಗಳೂ, ಅಧೈರ್ಯಿಗಳೂ ಇರುವರೆಂದು, ನನಗೆ ಇಂದು ಗೊತ್ತಾಯಿತು. ( ಡೇರೆಯ ಬಾಗಿಲಿಗೆ ಕೈಯಿಟ್ಟು ಸೈನಿಕರ ಕಡೆಗೆ ನೋಡುತ್ತ ) ಬರುವ ಆಪತ್ತನ್ನು ಎದುರಿಸಿ, ಒದ್ದೋಡಿಸುವ ಬಲಶಾಲಿಗಳು ಯಾರಾದರೂ ಇರುವರೋ ಹೇಗೆ ?

( ಎಲ್ಲ ಸೈನಿಕರು ಸ್ತಬ್ಧರಾಗಿ ನಿಂತುಕೊಳ್ಳುವರು. )

೧ನೇ ಶಿಪಾಯಿಃ – ನಮಗೆ ಮನೆಗೆ ಹೋಗಲು ಅಪ್ಪಣೆ ಕೊಡಿರಿ.

ಸಿಕಂದರಃ— ನಿಮಗೆ, ಮನೆಗೆ ಹೋಗಲು ಅಪ್ಪಣೆ ಸಿಗಲಾರದು. ಸೈನಿಕರು ತಮ್ಮ ರಾಜನ ಆಜ್ಞೆ ಪಾಲಿಸಲೇಬೇಕು. ಆತನ ಸುಖ ದುಃಖಗಳು, ತಮ್ಮ ಸುಖ ದುಃಖಗಳೆಂದೇ ತಿಳಿಯಬೇಕು ಅವನ ಮಾತೇ ತಮ್ಮ ಮಾತೆಂದು ತಿಳಿಯಬೇಕು

೧ನೇ ಶಿಪಾಯಿ:— ಅಂದರೆ; ಎಲ್ಲ ಸುಖ ಸಂತೋಷಗಳೂ ಕೇವಲ ನಿಮಗಾಗಿ ಇರುವವೆ ? ನಮಗಾಗಿ ಯಾವ ಸುಖ ಸಂತೋಷಗಳೂ ಇಲ್ಲವೇನು ?

೩ನೇ ಶಿಪಾಯಿಃ— ನೀವು ಏನು ಆಜ್ಞೆ ಮಾಡುವಿರೋ ಅದೆಲ್ಲವೂ ಆಗಬೇಕು ! ನಾವೇನನ್ನು ವೆಪ್ಪೋ ಅದೆಲ್ಲವೂ ಮಣ್ಣು ಪಾಲಾಗಬೇಕು. ಇದೇ ಅಲ್ಲವೇ ತಮ್ಮ ಆಜ್ಞೆ ?

ಸಿಕಂದರಃ— ತಿಳಿದು ನೋಡಿರಿ ! ನೀವು ನಿಮ್ಮ ಬಾದಶಹನಿಗೆ ಅಪಮಾನ ಮಾಡಿದಂತಾಗುವದಿಲ್ಲವೆ ? ಈಗಲಾದರೂ ನೀವು ನೆನಪಿಗೆ ತಂದುಕೊಳ್ಳಿರಿ. ಯುನಾನದಿಂದ ಹೊರಡುವಕಾಲಕ್ಕೆ, ಎಂಥ ಪ್ರತಿಜ್ಞೆ ಮಾಡಿರುವಿರೆಂಬುದನ್ನು ನಮ್ಮ ಗೆಲುವಿಗಾಗಿ, ನೀವು ನಿಮ್ಮ ರಕ್ತದ ಪ್ರತಿ ಹನಿಯನ್ನೂ ಬಲಿ ಕೊಡುವೆವೆಂದು ಪ್ರತಿಜ್ಞೆ ಮಾಡಿಲ್ಲವೇ ? ಹೋಗಿರಿ, ಇಲ್ಲಿಂದ ಹೊರಟು ಹೋಗಿರಿ. ನಿಮ್ಮೆಲ್ಲರ ತಪ್ಪನ್ನು ಕ್ಷಮಿಸಿದೆ.

೧ನೇ ಶಿಪಾಯಿ:— ನಾವು ನಮ್ಮ ಪ್ರತಿಜ್ಞೆಯನ್ನು ಪೂರೈಸಿಲ್ಲವೆ ? ನಿಮ್ಮ ಪ್ರತಿಯೊಂದು ಮಾತನ್ನೂ ಪೂರೈಸಿ ಕೊಡಲಿಲ್ಲವೇ ? ಅದ

ಕ್ಕಾಗಿ ಮೃತ್ಯು ಮುಖದಲ್ಲಿ ನಿಂತು ಹೋರಾಡಲಿಲ್ಲವೆ? ಸಾವಿ
ಗಾಗಿ ಹೆದರಿ, ಹಿಂದಕ್ಕೆ ಎಂದಾದರೂ ಸರಿದಿರುವೆವೆ?

**೨ನೇ ಶಿಪಾಯಿ:**— ನಿಮಗಾಗಿ, ನಾವು ನಮ್ಮ ಜೀವವನ್ನೇ ಮುಡು
ಪಾಗಿಟ್ಟು, ಅರ್ಧ ಜಗತ್ತನ್ನು ಗೆದೆಯಲಿಲ್ಲವೆ?

**೩ನೇ ಶಿಪಾಯಿ:**— ಮಾನವನ ಆಶೆ ಆಕಾಂಕ್ಷೆಗಳು ಮಿತಿ ಮೀರ
ಕೂಡದು. ಮಿತಿಮೀರಿದ ಆಕಾಂಕ್ಷೆ ಮಾನಹಾನಿಗೆ ಕಾರಣ
ವಾಗುವದು.

**೪ನೇ ಶಿಪಾಯಿ:**— ಇಡೀ ಜಗತ್ತನ್ನೇ ನಿಮ್ಮ ಅಧೀನವಲ್ಲಿರಬೇಕೆನ್ನು
ವಿರಿ ಆದರೆ ಜಗತ್ತು ಬಹಳ ದೊಡ್ಡದಿರುವದು ಮನುಷ್ಯನು
ಬಹಳ ಸಣ್ಣವನಿರುವನು. ಮನುಷ್ಯನು ಎಷ್ಟೇ ದೊಡ್ಡವನಾದರೂ
ಜಗತ್ತಿನಷ್ಟು ದೊಡ್ಡವನಾಗಲಾರನು. ಜಗತ್ತಿನ ಸರ್ವ ಶಕ್ತಿಗಳು
ಒಟ್ಟು ಗೂಡಿದರೂ ಅದಕ್ಕೆ ಸಾಟಿಯಾಗಲಾರದು.

**ಸಿಕಂದರ:**— ನೀವು ನಿಮ್ಮ ರಾಜಪುತ್ರನನ್ನು ನಿರಾಶರನ್ನಾಗಿ ಮಾಡ
ಬೇಡಿರಿ!

**೧ನೇ ಶಿಪಾಯಿ:**— ರಾಜಪುತ್ರನನ್ನು ನಿರಾಶನನ್ನಾಗಿ ನಾವು ಮಾಡುವ
ದಿಲ್ಲ. ನಮ್ಮನ್ನು ನೀವು ನಿರಾಶರನ್ನಾಗಿ ಮಾಡಬೇಡಿರಿ. ನಮ್ಮನ್ನು
ನಮ್ಮ ನಮ್ಮ ಮನೆಗೆ ಕಳಿಸಿ ಕೊಡಿರಿ.

**ಎಲ್ಲ ಶಿಪಾಯಿಗಳು:**— ನಮ್ಮನ್ನು ಮನೆಗೆ ಕಳಿಸಿಕೊಡಿರಿ! ನಮ್ಮನ್ನು
ಮನೆಗೆ ಕಳಿಸಿ ಕೊಡಿರಿ!

**೨ನೇ ಶಿಪಾಯಿ:**— ನಾವು ಹೇಡಿಗಳಲ್ಲ, ಯುದ್ಧ ಮಾಡಿರುವೆವು.
ಯುದ್ಧ ಮಾಡಿ ಗೆದ್ದಿರುವೆವು

**ಸಿಕಂದರ:**— (ಒಮ್ಮೆಲೆ ಸಂತೋಷಿತನಾಗಿ) ನಾವು ಗೆದ್ದಿರುವೆವೆಂದು
ಯಾರು ಹೇಳುವರು? ನಾವಿನ್ನೂ ಪೂರ್ಣ ಗೆದ್ದಿರುವುದಿಲ್ಲ,
ಗೆದೆಯುವ ಮಾರ್ಗದಲ್ಲಿದ್ದೇವೆ. ನೀವು ಯುನಾನದಿಂದ ಹೊರಡು
ವಾಗ ಸಣ್ಣ ರಾಜ್ಯದವರಾಗಿದ್ದಿರಿ. ಈಗ ಸಾಮ್ರಾಜ್ಯದವರಾ
ಗಿದ್ದೀರಿ. ಈ ವರೆಗೆ ನೀವು ಇರಾಣ ಗೆದ್ದಿರುವಿರಿ, ಇರಾಕ ಗೆದ್ದಿ
ರುವಿರಿ, ಅರಬಸ್ಥಾನ ಗೆದ್ದಿರುವಿರಿ. ಕಾಬೂಲ ಮತ್ತು ಕಂದರ

ಗಳನ್ನು ಗೆದ್ದಿರುವಿರಿ ಅವುಗಳ ಮಾಲಿಕರಾಗುವವರಿದ್ದೀರಿ ಈಗ ಹಿಂದುಸ್ಥಾನ ಗೆದೆಯೋಣ. ನಾಳೆ ಮಹಾ ಸಾಮ್ರಾಜ್ಯ ಕಟ್ಟೋಣ. ಸೂರ್ಯ ಚಂದ್ರರು ಮುಳುಗದಂಥ ಸಾಮ್ರಾಜ್ಯ ಕಟ್ಟೋಣ. ಆಗ ಜಗತ್ತು ನಿಮಗೆ ಮಹಾ ಸಾಮ್ರಾಜ್ಯದ ಸೈನಿಕರೆಂದು ಕರೆಯುವರು. ಕರೆದು ಗೌರವಿಸುವರು. ಆದರೀಗ ನಿಮ್ಮಲ್ಲಿ ಮನೆಯ ಮೋಹವು ಎದ್ದು ಕುಳಿತಿದೆ. ಆದರದು ಹೇಡಿಯ ಹಂಬಲವಾಗುವದು. ಹೇಡಿಯು, ಕಷ್ಟದಲ್ಲಿ ನೋಂಸಿ ಶುದ್ಧವಾದ, ತೇಜಃಪುಂಜ ಆತ್ಮಗೌರವವನ್ನು ಅನಿಷ್ಟವೆಂದು ಕರೆಯುವನು. ನೀವು ಹೇಡಿಯಾಗಬೇಡಿರಿ, ಕಳೆದುಹೋದ ಶೂರತ್ವವನ್ನು ಒಂದು ಗೂಡಿಸಿಗೊಳ್ಳಿರಿ. ಈಗ ಹೇಳಿರಿ! ದಾಳಿ ಮಾಡಲು ಸಿದ್ಧರಾಗಿದ್ದೇವೆಂದು.

**೧ನೇ ಶಿಪಾಯಿ:—** ನಮ್ಮ ಮನಸ್ಸು ನಮ್ಮ ಮನೆಯನ್ನೂ ಮನೆಯವರನ್ನೂ ನೋಡಲು ಬಹಳ ಹಾತೊರೆಯುತ್ತಿರುವಾಗ, ದಾಳಿ ಮಾಡಲು ಸಿದ್ಧರಾಗುವದು ಹೇಗೆ?

**೨ನೇ ಶಿಪಾಯಿ:—** ಪೋರಸನ ಕೂಡಾದ ಯುದ್ಧದಿಂದ, ನಮಗೆ ಹೀಗೆ ಅನಿಸುತ್ತದೆ! ಅವನಿಗಿಂತಲೂ ಹೆಚ್ಚಿನ ಶಕ್ತಿಶಾಲಿ ವೈರಿಗಳನ್ನು ಎದುರಿಸಬೇಕಾಗುವದು.

**ಸಿಕಂದರ:—** ( ಖಿನ್ನ ಮನಸ್ಸಿನಿಂದ ) ಹಾಗಾದರೆ ಹೋಗಿರಿ! ನಿಮ್ಮ ಚಕ್ರವರ್ತಿಯನ್ನು ವೈರಿರಾಜ್ಯದಲ್ಲಿ ಬಿಟ್ಟು ಬಂದೆವು. ಅವನೀಗ ಸತ್ತಿರಬಹುದೆಂದು, ನಿಮ್ಮ ಮನೆಯವರಿಗೆ, ನಿಮ್ಮ ಊರವರಿಗೆ ಹೇಳಿರಿ.

( ಎಲ್ಲ ಸೈನಿಕರು ಹೊರಟು ಹೋಗುವರು. )

**ಸಿಕಂದರ:—** ಯುಮುನೀಸ!

**ಯುಮುನೀಸ:—** ಚಕ್ರವರ್ತಿಗಳೇ!

**ಸಿಕಂದರ:—** ( ಸಿಟ್ಟಿನಿಂದ ಅತ್ತಿತ್ತ ಅಡ್ಡಾಡತೊಡಗುವನು. ) ನಾನು ಈ ವರೆಗೆ, ಯಾರಿಂದಲೂ ಪ್ರತ್ಯುತ್ತರ ಹೊಂದಿರಲಿಲ್ಲ! ಆದರೆ ಈಗ

ನನ್ನ ಸೈನಿಕರೇ ನನಗೆ ಪ್ರತ್ಯುತ್ತರ ಕೊಟ್ಟರು. ಯುಮುನೀಸ! (ದುಃಖದಿಂದ) ಜಗತ್ತು ಏನನ್ನುವದು? ಜನಾಂಗವು ಏನನ್ನುವದು? ಮುಂದಿನ ಪೀಳಿಗೆ ಏನನ್ನುವದು? (ಯುಮುನೀಸನ ಮುಂದೆಬಂದು ನಿಂತು) ಏನಾದರೊಂದು ವಿಚಾರ ಮಾಡಬೇಕು. ಯಾವದಾದರೊಂದು ಉಪಾಯ ಹುಡುಕಲೇಬೇಕು. ನಮ್ಮ ಸೈನಿಕರಿಂದಲೇ ಪ್ರತ್ಯುತ್ತರ ಹೊಂದಿ ಸುಮ್ಮನೇ ಕೂಡ್ರುವದು, ನನ್ನಿಂದ ಸಾಧ್ಯವಿಲ್ಲ. (ಹೋಗ ಹೋಗುತ್ತ ಒಮ್ಮೆಲೇ ಹೊರಳಿನಿಂತು) ಇದಕ್ಕೇನಾದೂ ಕಾರಣ ಇರಬೇಕು. ಯಾರದಾದರೂ ಫಿತೂರಿಯಿರಬೇಕು. ಆ ಫಿತೂರಿಯನ್ನು ಪತ್ತೆ ಹಚ್ಚು.

(ಸಿಕಂದರನು ತನ್ನ ಡೇರೆಯ ಕಡೆಗೆ ಹೊರಟು ಹೋಗುವನು. ಶೆಲುಕ್ಯಸ, ಯುವಮುನೀಸರು ತಮ್ಮ ತಮ್ಮ ಡೇರೆಯ ಕಡೆಗೆ ಹೊರಟು ಹೋಗುವರು. ರಂಗ ಭೂಮಿಯಮೇಲೆ ಕತ್ತಲೆಯಾಗುವದು. ಕೆಲ ನಿಮಿಷಗಳ ನಂತರ ಪುನಃ ಬೆಳಕು ಆಗುವದು ಮತ್ತು ರಾತ್ರಿಯ ಹಿಲಾಲುಗಳು ಉರಿಯುತ್ತಿರುವವು, ದೇವಕುಲಸ ಮತ್ತು ರೆನಿಯಾಸರು ಪಹರೆ ಮಾಡುತ್ತಿರುವರು, )

**ದೇವಕುಲಸಃ—** ಏನಣ್ಣಾ! ಚಕ್ರವರ್ತಿಗಳು ಮಲಗ್ಯಾರೋ ಏನ್ ಎಚ್ಚರದಾರೋ?

**ರೆನಿಯಾಸ:—** ಇವತ್ತೂ ನಿದ್ರಾದೇವಿಯ ಕೃಪಾದೃಷ್ಟಿಯು ನಮ್ಮ ಬಾದಶಹರ ಮೇಲೆ ಇಲ್ಲ. ಅವರು ಬೆಳ್ಳ ಬೆಳತನಕಾ ಎಚ್ಚರಾಗೇ ಇರುವರು.

**ದೇವಕುಲಸ:—** ಏನ್ಮಾಡ್ಯಾರ್ಪಾ ಇನ್ನಾ!. ಇವತ ಅವರ್ದು ಪರಿಸ್ತಿತಿನೂ ಹಾಂಗೈತಿ.,

**ರೆನಿಯಾಸ:—** ಇವತ್ತ ಅವರ ಸ್ಥಿತಿ, ಸೂರ್ಜಾ ನಾಲ್ಕು ದೀಪಕ್ಕ ಹೆದರಿದ್ಹಾಂಗಾಗೈತಿ. ಇಲ್ಲಿದ್ರ ಸೈನಿಕ್ರು ತಿರಿಗಿ ಮಾತ್ನಾಡೋ ಮುಂದ ಸುವಿನ್ನಿರತ್ತಿದ್ರ! ಒಬ್ಬಬ್ಬರ್ನ..ಕತ್ತರ್ಸಿ.ಬಿಡತಿದ್ರು.

ದೇವಕುಲಸ:— ಅಲ್ಲಪಾ ! ಮನಶ್ಯಾ ಎಟ್ಟಮ್ಯಾಲೆ ಹ್ವಾದ್ರನೂ ವಂದಾರ್ರಿವ್ನ ತೆಳ್ಗಬರಾಕss ಬೇಕು. ದೇವರ್ನ್ನೇಮಾನss ಹಾಂಗೈತಿ.

ರೆನಿಯೂಸ:— ದ್ಯಾವ್ರ, ಪ್ರತ್ಯೊಬ್ಬರ್ಗೂ ಮ್ಯಾಲೆರಾಕಾ ಪರ್ವಾನ್ಗಿ ಕೊಡ್ತಾನ, ಆದ್ರ ಯಾರ್‍ಯಾರ್ಗೆ ಎಟ್ಟೆಷ್ಟು ಕೊಡಬೇಕಂತ ಮಾಡಿರತಾನ, ಅಷ್ಟಷ್ಟ ಕೊಡತಾನ, ಅವರು ಅಲ್ಲಿಗೆ ಬಂದ ಕೂಡ್ಲೆ. ಇನ್ಮ್ಯಾಲೆ ನೀವು ಮುಂದೆ ಹೋಗಬೇಡಿರಿ, ಎಂದು ಹೇಳತಾನ. ಅದಕ್ಕವರು ಕೇಳದಿದ್ದರ, ಅವರಿಗೆ ಕೇಡು ಕಟ್ಟೈಟ್ಟಂಗ ಹಂಗ ನಮ್ಮ ಬಾದಶಹರ ಉನ್ನತಿಯು ಮಾರ್ಗ ಬಂದಾದಂಗ ಕಾಣತೈತಿ.

ದೇವಕುಲಸ:– ಆದರೆ ಇವತ್ತು ಸೈನಿಕರದು ತಪ್ಪಿತ್ತು. ಚಕ್ರವರ್ತಿಯದು ಏನೂ ತಪ್ಪಿಲ್ಲ.

ರೆನಿಯೂಸ:– ಯಾರರ ಕೇಳಿಗೀಳ್ಯಾರ ಸಾವಕಾಶ ಮಾತಡ ಅಲ್ಲಪಾ! ನೀನ ಹೇಳು ಆ ಬಡ ಸೈನಿಕರಾರ ಏನ ಮಾಡ್ಯಾರ ? ಊರು ಬಿಟ್ಟು ಒಂದ ವರ್ಷss ಎರಡ ವರ್ಷss ಮೂರು ವರ್ಷss ಹದ್ನಾಕ ವರ್ಷಾತು. ಹದ್ನಾಕ ವರ್ಷಂದ್ರ ಅದರ್ಧ ಆಯುಷ್ಯ ಕಳದಂಗ. ಅಲ್ಲಾ! ನೀ ಮನೀ ಬಿಟ್ಟ ಬರುವಾಗ, ನಿನ್ಮಗಳು ಎಷ್ಟವರ್ಷದಾಕಿ ಇದ್ದಳು ?

ದೇವಕುಲಸ:— ಆಗ ನಾಲ್ಕು ವರ್ಷದಾಕಿದ್ಲು.

ರೆನಿಯೂಸ:— ಅಂದರ, ಈಗಾಕಿ ಹದ್ನೆಂಟ ವರ್ಷದಾಕಿ ಆಗಿದ್ದಾಳ. ಆಕಿ ಈಗ ಲಗ್ನಾ ಮಾಡ್ಕೊಂಡು ಗಂಡನ ಮನಿಗೆ ಹೋಗಿದ್ದಾಳ. ಈಗ ಆಕಿ ಹ್ಯಾಂಗಿದ್ದಾಳ ? ಏನೇನ ಮಾತಾಡತಾಳ ? ಇದು ನಮ್ಮ ಮನಸ್ಸಿನ್ಯಾಗ, ಇಲ್ಲಿರು ತನಕಾ ಬರಾಕ ಸಾಧ್ಯಿಲ್ಲ. ವಿಚಾರ ಮಾಡಾಕ ಸಾಧ್ಯಿಲ್ಲ.

ದೇವಕುಲಸ:– ನನಗ ಒಮ್ಮೊಮ್ಮೆ ಹಿಂಗನಸತೈತಿ. ಇಲ್ಲಿಂದ ಹೇಳದ ಕೇಳದ ಓಡಿ ಹೋಗಲೇನು ? ಅನಸತೈತಿ ಆದರ ಹೆದರಿ ಸುಮ್ಮ ನಿರತೇನಿ.

ರೆನಿಯೂಸ:— ನನ್ನ ಗತಿನೂ ಹಂಗ ಐತಿ. ನಾ ಮನಿಬಿಟ್ಟ ಬರುವಾಗ, ನನ್ಹೇಣತಿ, ಇಪ್ಪತ್ತು ವರ್ಷದ ತುಂಬಿದ ತರುಣಿ ಇದ್ಲು. ಆಕಿನ

ಬಿಟ್ಟ ಅರಗಳಿಗಿರಾಕ ಮನಸಾಗತಿದ್ದಿಲ್ಲ. ಅಷ್ಟ ಚಂದ ಇದ್ಲ. ಆಕಿ ನನ್ನೊಮ್ಮೆ ನೋಡಿದರ ನನ್ನ ಮೈಯಾಗ ಇಲಕ್ಟರಿ ಕರೆಂಟ ಬಿಟಂಗಾಗತಿತ್ತು, ನನ್ನ ರಕ್ತ ಕಾಯ್ತು, ಒಮ್ಮೆಲೆ ಹೋಗಿ ಆಕಿನ ಹಿಂಗ (ದೇವಕುಲಸನ ತೆಕ್ಕಿಬಿಳಾಕ ಹೋಗತಾನ ಆಗವನು ಹಿಂದೆ ಬಾಗಿ ತಪ್ಪಿಕೊಂಡು).

**ದೇವಕುಲಸ:**— ನಾ ನಿನ್ಹೇಣತಿ ಅಲ್ಲೋ! ಮಹಾರಾಯಾ!

**ರೆನಿಯಾಸ:**— ಹಾಂ... (ಹಿಂದ ಸರಿದ ಕೂಂತು) ಆ ವಿಚಾರ ತೆಲ್ಯಾಗ ಬಂತಂದರ ಹಿಂಗಾಗತೈತಿ.

**ದೇವಕುಲಸ:** ನಿನನ್ನೊದು ಖರೆ ಐತಿ.

**ರೆನಿಯಾಸ:**— ಹರೆ, ( ತಾರುಣ್ಯ ) ಜೀವನದಾಗ ಒಮ್ಮೆ ಬರತೈತಿ, ಮತ್ತ ಬರುದಿಲ್ಲ ಹರೆ ಹೋದರ ಜೀವನದ ರುಚಿ ಹೋದಂಗ. ಅಂಥಾ ಮಹತ್ವದ್ದ ಹರೆನ ಪರದೇಶದಾಗ ಕಳದಬಿಟ್ಟೆವಿ

(ಒಮ್ಮೆಲೆ ಹೊರಗೆ ಗದ್ದಲವಾಗುವದು ಆಗ ರೆಸಿಯಾಸ ದೇವ ಕುಲಸರು ಚೀತರಿಸಿಕೊಂಡು ಎದ್ದು ನಿಲ್ಲುವರು. ಅಷ್ಟರಲ್ಲಿ ಇಪ್ಪತ್ತು ಜನ ಸೈನಿಕರು ಬರುವರು. ಅವರ ಕೈಯಲ್ಲಿ ಬಿಚ್ಚುಗತ್ತಿಗಳಿರುವವು ರೆಸಿಯಾಸ ದೇವಕುಲಿಸರನ್ನು ಹಿಡಿದು, ಬಾಯಿಯಲ್ಲಿ ಅರವಿ ಇಟ್ಟು ಕಟ್ಟಿ ಹಾಕುವರು. ಅವರ ಕೈಯಲ್ಲಿ ಕಠಾರಿ ಕಸಗೊಂಡು, ಸಿಕಂದರನು ಮಲಗಿದ್ದ ಕಡೆಗೆ ಹೋರಡುವರು. ಅಷ್ಟರಲ್ಲಿ ಪುರುರಾಜನು ಬರುವನು.)

**ಪುರು:**— ಅಲ್ಲೇ ನಿಲ್ಲಿರಿ! ಸಿಕಂದರ ನಿಮ್ಮ ರಾಜನಿರುವನು.

**ಒಬ್ಬ ಸಿಪಾಯಿ:**— ನಮಗೆ ಆಜ್ಞಾ ಮಾಡಲು ನೀವು ಯಾರು?

**ಪುರು:** – ನಾನು, ಈ ದೇಶದ ರಾಜಾ ಪುರು ಇರುವೆನು.

**ಎಲ್ಲ ಸಿಪಾಯಿಯರು:**— (ಗಾಬರಿಯಾಗಿ)ರಾಜಾ ಪುರು !

**ಪುರು:**— ಹಾಂ.... ನಿಮ್ಮೆದುರು ರಾಜಾ ಪುರು ನಿಂತಿದ್ದಾನೆ

**ಸಿಪಾಯಿಯರು:**— ( ಯುನಾನದ ಪದ್ಧತಿಯಂತೆ ನಮಸ್ಕಾರ ಮಾಡಿ ) ನಾವು ನಿಮಗೆ ಶರಣು ಮಾಡುವೆವು.

**ಪುರು:**- ನಿಮ್ಮ ಈ ವಿಚಾರ ಬಿಟ್ಟು ಹೊರಟು ಹೋಗಿರಿ. ನಿಮಗೆ ಯಾವ ಸಂಕಟವೂ ಬರದಂತೆ ನೋಡಿಕೊಳ್ಳುವೆನು. ಆದರಂತೆ ನಿಮಗೆ

ವಚನ ಕೊಡುವೆನು. ಮತ್ತು ಈ ಸುದ್ದಿಯು ನಿಮ್ಮರಾಜನ ಕಿವಿಗೂ ಮುಟ್ಟಲಾರದು. ನಿಮಗೆ ಯಾವ ತರದ ಶಿಕ್ಷೆಯೂ ಆಗ ಲಾರದು.

**ಒಬ್ಬ ಸಿಪಾಯಿಃ** . ನಮ್ಮ ರಾಜನು ಹೊಸ ಹೊಸ ರಾಜ್ಯದ ಮೇಲೆ ದಾಳೀ ಮಾಡಬೇಕು, ಎನ್ನುತ್ತಾನೆ. ನಮ್ಮನ್ನು ಕೊಂದು, ತನ್ನ ಮಾನ ಮರ್ಯಾದೆಯ ಮಂದಿರ ಕಟ್ಟಬೇಕೆನ್ನುನ್ನಾನೆ ಅವನ ಈ ಆಶೆಯು ಬೆಳೆಯುತ್ತ ಹೋಗುತ್ತದೆಯೇ ಹೊರ್ತು ಮುಗಿಯ ಲಾರದು.

**ಗುರುಃ**- (ಸಿಧಾನವಾಗಿ) ನಾನು ನಿಮ್ಮ ಬಾದಶಹನಿಗೆ, ನಿಮ್ಮ ಸೈನಿಕರು ದಣಿದಿರುವರು ಅವರನ್ನು ವಾಪಸ ಊರಿಗೆ ಕಳಿಸಿಕೊಡಿರಿ ಎಂದು ಹೇಳುವೆನು. ನೀವು ನಿಮ್ಮ ನಿಮ್ಮ ಊರಿಗೆ ಹೋಗಲು ಅಪ್ಪಣೆ ಸಿಗುವದು

**೨ನೇ ಸಿಪಾಯಿಃ** ನಮ್ಮ ಬಾದಶಹನು ನಿಮ್ಮ ಮಾತು ಕೇಳಲಾರನು ಅವನು ತನ್ನ ತಲವಾರ, ತನ್ನ ಮನಸ್ಸು, ಮತ್ತು ತನ್ನ ಗುರು ಆರಸ್ತು ಇವರ ಮಾತು ಕೇಳುವನು.

**೩ನೇ ಸಿಪಾಯಿಃ**-- ನಾವು ನಿಮ್ಮ ವೈರಿಯನ್ನು ಕೊಲ್ಲುತ್ತೇವೆ. ನೀವು ನಿಮ್ಮ ವೈರಿಯ ಸಾವಿನಿಂದ ಸಂತೋಷಗೊಳ್ಳಬೇಕು.

**ಗುರುಃ**-- ನಾನು ಕಪಟಿಯಲ್ಲ. ಕಪಟತನವು ನನಗೆ ಸರಿ ಬೀಳುವದಿಲ್ಲ ವೈರತ್ವವು ಯುದ್ಧ ಮೈದಾನದಲ್ಲಿ; ಯುದ್ಧ ಮಾಡುವಾಗ. ಕಳ್ಳ ತನದಿಂದ ಕೊಲ್ಲುವದು ನನಗೆ ಬೇಕಾಗಿಲ್ಲ ನಿಮ್ಮ ಬಾದಶಹನು ಈಗ ನನ್ನ ವೈರಿಯಾಗಿಲ್ಲ, ಮಿತ್ರನಾಗಿದ್ದಾನೆ. ಮಿತ್ರತ್ವದ ಕೈ-ಕೂಡಿವೆ (ಸಾವಕಾಶ ಮತ್ತು ಗಂಭೀರ ಧ್ವನಿಯಲ್ಲಿ) ಈಗ ನೀವು ಇಲ್ಲಿಂದ ಹೊರಟು ಹೋಗಿರಿ! ನಿಮಗೆ ಪುನಃ ವಚನ ಕೊಡುವೆನು ಈ ಸುದ್ದಿಯು ನಿಮ್ಮ ರಾಜನ ಕಿವಿಗೆ ಮುಟ್ಟಲಾರದು. ನಿಮ್ಮ ಜೀವ ಮತ್ತು ನೌಕರಿಗಳಿಗೆ ಎಳ್ಳಷ್ಟು ಧಕ್ಕೆ ಹತ್ತಲಾರದು.

**೩ ನೇ ಸಿಪಾಯಿಃ**— ಆದರೆ ನಾವು ನಿಮ್ಮ ಮಾತು ಕೇಳದಿದ್ದರೆ! ..

**ಪುರು:**— (ನಕ್ಕು) ನೀವು ನಿಮ್ಮ ಬಾದಶಹನಕ್ಕಿಂತ ಮೊದಲು ನನ್ನ ಕೂಡ ಯುದ್ಧ ಮಾಡಬೇಕಾಗುವದು.

**೪ ನೇ ಸಿಪಾಯಿ:**— ಮಹಾರಾಜ ನೀವು ಒಬ್ಬರೇ ಇರುವಿರಿ ನಾವು ಇಪ್ಪತ್ತು .......

**ಪುರು:**— ( ನಡುವೆ ಬಾಯಿಹಾಕಿ ) ನಿಮ್ಮ ದೃಷ್ಟಿಯಲ್ಲಿ ನಾನು ಒಬ್ಬನೇ ಇದ್ದದ್ದು ನಿಜ. ಆದರೆ ನನ್ನ ಕೂಡ ನನ್ನೆಲ್ಲ ಸೈನ್ಯವೂ ಇರುವದು. ನಾಲ್ಕುದಿಕ್ಕಿಗೂ ನಿಂತಿರುವದು. ಈಗ ಹೇಳಿರಿ ! ನೀವು ಜೀವದಿಂದ ಉಳಿಯಬೇಕೆನ್ನುವಿರೋ ಅಥವಾ ಸಾಯಬೇಕೆನ್ನುವಿರೋ !

( ಪುರು ನಿರ್ಭಯದಿಂದ ಅತ್ತಿತ್ತ ಅಡ್ಡಾಡ ತೊಡಗುವನು. ಸಿಪಾಯಿಯರು ಒಬ್ಬರನ್ನೊಬ್ಬರು ನೋಡ ತೊಡಗುವರು. ಮತ್ತು ಕಣ್ಣು ಸಂಜ್ಞೆ ಮಾಡುವರು. ಆಮೇಲೊಬ್ಬ ಸೈನಿಕನು ಮುಂದೆ ಬಂದು ಪುರು ಮಹಾರಾಜನ ಮುಂದೆ ನಿಂತು, ಶರಣು ಮಾಡುವನು. )

**ಪುರು:**— ನೀವು ಏನು ನಿಶ್ಚಯಿಸಿಕೊಂಡಿರಿ.

**ಸಿಪಾಯಿಯರು:**— ನಿಮ್ಮ ಆಜ್ಞೆಯಂತೆ ನಡೆಯುವೆವು. ಆದರೆ ನಮ್ಮ ಜೀವ ಸಂಕಟದಲ್ಲಿರುವದು

**ಪುರು:**— ನೀವು ಚಿಂತೆ ಮಾಡಬೇಡಿರಿ. ನಿಮಗೆ ಯಾವ ಅಪಾಯವೂ ಆಗಲಾರದು.

**ಸಿಪಾಯಿಯರು:**— (ಶರಣು ಮಾಡಿ, ಸಣ್ಣ ಸ್ವರದಲ್ಲಿ) ಪುರುರಾಜರಿಗೆ ಜಯವಾಗಲಿ !

( ಎಂದು ಜಯಘೋಷ ಮಾಡಿ ಹೊರಟು ಹೋಗುವರು. ಪುರು ರಾಜನು, ರೆನಿಯಾಸ ದೇವಕುಲಸರನ್ನು ಬಿಚ್ಚುವನು. ಅವರು ಶರಣು ಮಾಡಿ ನಿಂತುಕೊಳ್ಳುವರು. )

**ಪುರು:**— (ರೆನಿಯಾಸನನ್ನು ಕುರಿತು) ರೆನಿಯಾಸ ! ನೀನು ಹೋಗಿ ನಿಮ್ಮ ಬಾದಶಹರು ಎದ್ದಾರೋ ಹೇಗೆ ನೋಡು ! ಎದ್ದಿದ್ದರೆ ನಾನು ಭೆಟ್ಟಿಯಾಗಲು ಬಂದಿರುವೆನೆಂದು ಹೇಳು. ಏಳದಿದ್ದ

(ರೆನಿಯಾಸನು ಹೊರಡುವನು. ಅಷ್ಟರಲ್ಲಿ ಪುರು ಅವನನ್ನು ಕರೆದು )

**ಪುರು:--** ಇಲ್ನೋಡಿಲ್ಲೆ ! ಈಗ ನಡೆದ ಸುದ್ದಿಯು ಅವರಿಗೆ ಗೊತ್ತಾಗ ಬಾರದು. ಸೈನಿಕರು ಆವರ ಮೇಲೆ ದಾಳಿ ಮಾಡಿದರೆಂದೂ, ನಾನು ಆವರ ಜೀವ ಉಳಿಸಿದೆನೆಂದೂ ಹೇಳಬಾರದು, ತಿಳಿಯಿತೇ ! ( ರೆನ್ನಿಯಾಸನು ಹೊರಟು ಹೋದ ನಂತರ ದೇವಕುಲಿಸನನ್ನು ಕುರಿತು ) ಸೈನಿಕ ! ನೀನು ನಿನ್ನ ಊರು ಬಿಟ್ಟು ಎಷ್ಟು ದಿವಸಾ ಯಿತು

**ದೇವಕುಲಿಸ:—** ಮಹಾರಾಜ, ನಾನು ಮತ್ತು ರೆನಿಯಾಸ ಊರ ಬಿಟ್ಟು ಹದಿನಾಲ್ಕ ವರ್ಷಾತು.

**ಪುರು:—** ಹದಿನಾಲ್ಕ ವರ್ಷ ! ಹದಿನಾಲ್ಕು ವರ್ಷದಲ್ಲಿ ಜಗತ್ತು ಬಹಳ ಬದ್ಲಾಗುತ್ತದೆ.

**ದೇವಕುಲಿಸ:—** (ತೊದಲಿಸುತ್ತ) ಹೌದು ಮಹಾರಾಜ.

**ಪುರು:—** ನೀವು ನಿಮ್ಮೂರಿಗೆ ಹೋಗಬೇಕಂತಿರೇನು ?

**ದೇವಕುಲಿಸ:--** (ಶರಣು ಮಾಡಿ) ಹೌದು ಮಹಾರಾಜ.

**ಪುರು:—** ಉಳಿದ ಸಿಪಾಯರು ಹೀಗೆ ಅನ್ನುವರೇನು ?

**ದೇವಕುಲಿಸ:—** ಹೌದು ಮಹಾರಾಜ.

(ಸಿಕಂದರ ಬರುವದು ಕಾಣುವದು. ದೇವಕುಲಿಸನು ಶರಣುಮಾಡಿ ಹೊರಟು ಹೋಗುವನು. ಸಿಕಂದರ ಸಮೀಪಕ್ಕೆ ಬರುವನು.)

**ಸಿಕಂದರ:—** ಪುರುರಾಜ ! ನೀವಿಂದು ಪುನಃ ಮತ್ತೊಮ್ಮೆ ನನ್ನ ಜೀವ ಉಳಿಸಿದಿರಿ. ನಾನಿಂದು ಮತ್ತೊಮ್ಮೆ ನಿಮಗೆ ನಮಸ್ಕರಿಸುವೆನು. ಇಷ್ಟುಸಲ, ನಾನು ಯಾರಿಗೂ ನಮಸ್ಕರಿಸಿಲ್ಲ. ಆದರೆ ನೀವು ಶೂರರಿದ್ದಂತೆ ಸಂಭಾವಿತರೂ ಇರುವಿರಿ

**ಪುರು:-** ನಿಮ್ಮ ಸಿಪಾಯಿಗೆ, ಈ ಸಂಗತಿಯನ್ನು ನಿಮಗೆ ತಿಳಿಸಬೇಡೆಂದು ಸಕ್ತ ತಾಕಿತ ಮಾಡಿದ್ದೆ. ಆದರೂ ಅವನು ತಿಳಿಸಿದ್ದರಿಂದ ನನಗೆ ಕೆಡಕೆನಿಸುತ್ತದೆ.

**ಸಿಕಂದರ:—** ಆದರೆ ಆವನದೇನೂ ತಪ್ಪಿಲ್ಲ. ನಾನು ಅವನನ್ನೊಮ್ಮೆ ಸೂಕ್ಷ್ಮ ಮತ್ತು ಕ್ರೋಧ ದೃಷ್ಟಿಯಿಂದ ನೋಡಿದೆ. ಆಗವನ

ಬಾಯಿಯಿಂದ ಈ ಮಾತುಗಳು, ಅವನಿಗರಿಯದಂತೆ ಬಂದು ಬಿಟ್ಟವು
(ಪುರುರಾಜನ ಕಡೆಗೆ ಕೈ ಮುಂದೆಮಾಡಿ,) ನಿಮ್ಮ ಉಪಕಾರ ನನ್ನ ಮೇಲೆ ಬಹಳಾಯಿತು.

**ಪುರು:**— (ಸಿಕಂದರನ ಕೈ ಹಿಡಿದು) ಇದೆಲ್ಲವೂ ದೇವರ ಇಚ್ಛೆ. ಅವನು ಏನು ಮಾಡುವನೋ ಅದನ್ನು ಮತ್ತೊಬ್ಬರ ಮೂಲಕ ಮಾಡಿಸುವನು. ಮನುಷ್ಯನು ಏನನ್ನೂ ಮಾಡನು.

**ಸಿಕಂದರ:** — ಹಿಂದುಸ್ಥಾನದ ಈ ಪದ್ಧತಿಗೆ ನನ್ನ ವಂದನೆಗಳು.

**ಪುರು:**— ನಾನು ನಿಮ್ಮೊಡನೆ ಕೆಲವು ವಿಷಯಗಳ ವಿಚಾರ ಮಾಡುವವು ಅವೆ.

**ಸಿಕಂದರ:**— (ನಗುತ್ತ) ನಿಮ್ಮ ವಿಷಯ ನನಗೆ ಗೊತ್ತಿದೆ. ನೀವು ಹೇಳುವ ಮೊದಲೇ ನಿಮ್ಮ ಪ್ರತಿಜ್ಞೆ ಪೂರೈಸಿದೆ. ಆ ಸೈನಿಕರಿಗೆ ಯಾವ ತೊಂದರೆಯೂ ಆಗಲಾರದು.

**ಪುರು:**— ಧನ್ಯ! (ನಗುತ್ತ) ಆದರೆ ಇನ್ನೂ ಕೆಲವು ವಿಷಯ ವಿಚಾರ ಹೇಳುವದದೆ

**ಸಿಕಂದರ:**- ಹಾಗಾದರೆ ಬನ್ನಿರಿ ಒಳಗೆ ಹೋಗೋಣ.

**ಪುರು:** - ನೀವು ನಿಮ್ಮ ಆತ್ಮೀಯ ಜನರನ್ನೆಲ್ಲ ಕರೆಯಿರಿ ಮಹತ್ವವೂ ಗಂಭೀರವೂ ಆದ ವಿಷಯದ ಮೇಲೆ ಚರ್ಚೆ ಮಾಡಬೇಕಾಗಿದೆ.

**ಸಿಕಂದರ:**— (ದೊಡ್ಡ ಧನಿಯಿಂದ) ಯಾರಿರುವರು ಅಲ್ಲಿ?
(ದೇವಕಾಲಿಸ ಬಂದು ಶರಣುಮಾಡಿ ನಿಂತುಕೊಳ್ಳುವನು.)

**ಸಿಕಂದರ:**— ಅಂಭಿಸ್, ಯುಮುನೀಸ, ಶಿಲುಕ್ಯಸ ಇವರಿಗೆ ತೀವ್ರ ಬಂದು ಭೆಟ್ಟಿಯಾಗಲು ಹೇಳು

## ದೃಶ್ಯ ೧೧

**ಸ್ಥಾನ:—** ಸಿಕಂದರನ ಸೈನ್ಯಠಾಣೆ. **ವೇಳೆ:—** ಮಧ್ಯರಾತ್ರಿ

(ಸಿಕಂದರ, ಅಂಭಿರಾಜ, ಶೆಲ್ಯುಕ್ಯಸ, ಯಮುನೀಸ ಇವರೆಲ್ಲರೂ ಕೂಡಿ ಕೂತಿರುವರು ಮತ್ತು ಗಂಭೀರ ವಿಚಾರದಲ್ಲಿ ಮಗ್ನರಾಗಿರುವರು.

**ಪುರು:—** ನಾನು ಸ್ವತಃ ಕೇಳಿದ್ದನ್ನು ಇಂದು ನಿಮ್ಮ ಮುಂದೆ ಹೇಳುತ್ತಿದ್ದೇನೆ. ನಿಮ್ಮ ಸೈನಿಕರು ಭೆಯುಗೊಂಡಿದ್ದಾರೆ. ಅವರ ಉತ್ಸಾಹ ಕುಂದಿದೆ ಅವರಲ್ಲಿ ಮನೆಯ ಮೋಹ ತುಂಬಿಕೊಂಡಿದೆ. ಅವರೀಗ ಮುಂದಿನ ದಾಳಿಗೆ ಹಿಂಜರಿಯುತ್ತಿದ್ದಾರೆ

**ಸಿಕಂದರ:--** ಯಮುನೀಸ ! ನಿನ್ನ ವಿಚಾರವೇನು ?

**ಯಮುನೀಸ:** ಚಕ್ರವರ್ತಿಗಳು ಚಿರಕಾಲ ಬಾಳಲಿ. ನಾನು ಹೀಗೆ ಕೇಳಿದ್ದೇನೆ. ನಮ್ಮ ಸೈನಿಕರಲ್ಲಿ ಯಾರೋ ಫಿತೂರಿಗಾರರು ಪ್ರವೇಶ ಮಾಡಿದ್ದಾರೆ, ಅವರು ಒಡಕನ್ನುಂಟು ಮಾಡಿದ್ದಾರೆ. ಸುಳ್ಳು ಹೇಳಿ ಮೋಸ ಮಾಡಿದ್ದಾರೆ. ಸೈನಿಕರಿಗೆ, ನಿಮ್ಮ ಜನರು ಸಾವಿರಗಟ್ಲೆ ಸತ್ತಿದ್ದಾರೆ. ಮುಂದೆ ಇದಕ್ಕೂ ದೊಡ್ಡ ಆಪತ್ತು ಒದಗುವದು ಈಗಿನಕಿಂತಲೂ ಹೆಚ್ಚು ಜನರು ಸಾಯುವರು. ಎಂದು ಹೇಳಿದ್ದಾರೆ. ಅದನ್ನೇ ನಮ್ಮ ಸೈನಿಕರು ನಂಬಿದ್ದಾರೆ. ಈಗ ಅವರಲ್ಲಿ ಧೈರ್ಯ ಉಳಿದಿಲ್ಲ. ಅಷ್ಟೇ ಅಲ್ಲ; ಅವರು ಯುದ್ಧದ ಹೆಸರು ಕೇಳಿದರೆ ಹೆದರುತ್ತಾರೆ.

**ಸಿಕಂದರ:—** ಶೆಲ್ಯುಕ್ಯಸ ! ನಿನ್ನ ಅಭಿಪ್ರಾಯವೇನು ?

**ಶೆಲ್ಯುಕ್ಯಸ:—** ನಮ್ಮ ಸೈನಿಕರಲ್ಲಿ, ಈ ವರೆಗೆ ಕಾಣದ್ದನ್ನು ಇಂದು ಕಾಣುತ್ತಿದ್ದೇವೆ. ಅದು ಅವರ ತಪ್ಪಲ್ಲ. ಅವರಿಗೆ ಹೆದರಿಸಿದ್ದಾರೆ, ಅವರು ಹೆದರಿದ್ದಾರೆ. ಇದು ಅಪರಾಧವಲ್ಲ ಫಿತೂರಿ ಇದೆ. ಸೈನ್ಯದಲ್ಲಿ ಫಿತೂರಿ ಅಪರಾಧದ ಶಿಕ್ಷೆ; ತಲೆ ಹೊಡೆಯುವದು. (ಶೆಲ್ಯುಕ್ಯಸ ಸ್ವಲ್ಪ ತಡೆದು ಕೆಲಮಿನಿಟ್ಟುಗಳ ವರೆಗೆ ವಿಶ್ರಾಂತಿ ಪಡೆದು ಮತ್ತೆ ಮಾತಾಡತೊಡಗುವನು.) ಆದರೆ ನಾವೀಗ ಸೈನಿಕರಿಗೆ ದಯತೋರಿಸಿದರೆ ನಮ್ಮ ಕುತ್ತಿಗೆ ನಾವೇ ಕೊಯ್ದುಕೊಂಡಂತೆ. ಬಾದಶಹ

ರಾದ ನೀವು, ನಿಮ್ಮ ಸಿಟ್ಟನ್ನು ಬಡಿದೆಬ್ಬಿಸಿರಿ. ಕೈಯಲ್ಲಿ ಕತ್ತಿ
ಹಿಡಿದು ನಿಲ್ಲಿರಿ ಆಗ ನಿಮ್ಮೆದುರು ಬಂದ ಸೈನಿಕನು, ನಿರ್ಭಯದಿಂದ
ಸಿಟಿದು ನಿಂತಿದ್ದಾದರೆ,ಅವರ ಕುತ್ತಿಗೆ ಕತ್ತರಿಸಿ ಬಿಡಿರಿ ಆಗ ಸೈನಿ
ಕರು ತಮ್ಮ ತಪ್ಪನ್ನು ತಿದ್ದಿಕೊಂಡು ಬಗ್ಗಿನಡೆಯುವರು.

**ಸಿಕಂದರಃ**— ನೀನು ಶೂರನಿರುವಿ,ಶೂರರು ಶೂರತನದ ಮಾತುಗಳನ್ನೇ
ಮಾತಾಡುವರು. ನಾನು ನಿನ್ನ ಮಾತನ್ನು ಒಪ್ಪಿಕೊಳ್ಳುವೆನು.

**ಅಂಭಿರಾಜ:**— ನಾನು ನಿಮಗೆ ವಚನಕೊಟ್ಟಿರುವೆನು. ಆ ವಚನವಂತೆ
ಈಗಲೂ ನಡೆಯುವೆನು. ನನ್ನ ಸೇನೆಯು ನಿಮ್ಮ ಸಂಗಡ ಯಾವಾ
ಗಲೂ ಇರುವದು. ಆದರೆ; ನಿಮ್ಮ ಸೈನ್ಯ ನಿಮ್ಮ ಸಂಗಡ ಎಲ್ಲಿಯ
ವರೆಗಿರುವದೋ, ಅಲ್ಲಿಯವರೆಗೆ ನಮ್ಮ ಸೈನ್ಯ ನಿಮಗೆ ಸಹಾಯ
ಮಾಡುವದು. ನಿಮ್ಮ ಸೈನ್ಯ ಎಲ್ಲಿಯವರೆಗೆ ನಿಮ್ಮ ಆಜ್ಞೆ ಪಾಲಿಸು
ವದೋ ಅಲ್ಲಿಯವರೆಗೆ ನಮ್ಮ ಸೈನ್ಯವೂ ನಿಮ್ಮ ಆಜ್ಞೆಪಾಲಿಸುವದು.

**ಸಿಕಂದರಃ**—ಮಹಾರಾಜ! ನಿಮ್ಮ ಮಾತು, ನನಗೆ ವಿಷದಂತಿವೆ. ಆದರೂ
ಅವು ಸತ್ಯವನ್ನು ಹೇಳುವವು. ಸತ್ಯವು ಯಾವಾಗಲೂ ವಿಷದಂತೆ
ಕಾಣುವದು. (ಅತ್ತಿತ್ತ ಅಡ್ಡಾಡಿ) ಈಗ ನಾನು ನನ್ನ ಎಲ್ಲ ಮಿತ್ರರ
ವಿಚಾರಗಳನ್ನು ಕೇಳಿದೆ ಆದರೆ ಈಗೇನು ಮಾಡಬೇಕು? ಈ
ಪ್ರಸಂಗಕ್ಕೆ ಹೆದರಿ ಹಿಂದೆ ಸರಿದರೆ, ಮರಣ ನಿಶ್ಚಯ. ಧೈರ್ಯ
ದಿಂದ, ಬಂದಿರುವ ಪ್ರಸಂಗವನ್ನು ಪುಡಿಮಾಡಬೇಕು. ಸೈನಿಕರು
ತಮ್ಮ ತಪ್ಪನ್ನು ತಿದ್ದಿಕೊಂಡು, ಕರ್ತವ್ಯವನ್ನು ಮುಂದೆ ಮಾಡಿ
ಬಂದರೆ, ನೆಟ್ಟಗೆ. ಇಲ್ಲವಾದರೆ ಪಿತೂರಿಗಾರರನ್ನೂ ಪಿತೂರಿಗಾರರ
ಮಾತಿಗೆ ಒಳಗಾದವರನ್ನೂ, ಕತ್ತರಿಸಿ ಒಗೆಯುವೆನು. ಯಾವ
ಬಾದಶಹನು ಸೈನಿಕರಿಗೆ ನಮ್ರತೆ ತೋರಿಸುವನೋ, ಯಾವ
ಬಾದಶಹನು ಸೈನ್ಯದ ಶಿಸ್ತು ಕಾಯ್ದುಕೊಳ್ಳುವದಿಲ್ಲವೋ, ಅವನು
ಯಾವಾಗಲೂ ಒಬ್ಬಂಟಿಗನಾಗಿಯೇ ಇರುವನು. ಅವನು ತನ್ನ
ಸರ್ವ ಶಕ್ತಿಯನ್ನೇ ಸೈನಿಕರಲ್ಲಿ ಬಿಟ್ಟು ಒಬ್ಬಂಟಿಗನಾಗಿ ವೈರಿವಶ
ವಾಗಬೇಕಾಗುತ್ತದೆ.

**ಶೆಲುಕ್ಯಸ:**— ಬಾದಶಹರು ಅನ್ನುವದು ಬರೋಬರಿ ಅದೆ. ಸೈನಿಕರ
ಶಕ್ತಿಯ ಹೊರ್ತು ನಮ್ಮ ಅಂಕಿತದಲ್ಲುಳಿಯಲಾರರು.

ಪುರು:— ನೀವು ತಪ್ಪು ಮಾಡುತ್ತಿದ್ದೀರಿ. ಈ ನಿಮ್ಮ ವಿಚಾರ ಬಿಟ್ಟು ಬಿಡುವದು ಉತ್ತಮ.

ಸಿಕಂದರ:— ನಮ್ಮ ಸೈನ್ಯದ ಫಿತೂರಿಗಾರನಿಗೆ ಶಿಕ್ಷೆ ವಿಧಿಸುವದು ಸಾಧ್ಯವಿಲ್ಲವೆಂದು ನಿಮ್ಮ ವಿಚಾರವೇನು ? ನಾನು ಬಾದಶಹನಿದ್ದೇನೆ. ಬಾದಶಹನು ಬೇಕಾದ್ದನ್ನು ಮಾಡಬಹುದು.

ಪುರು:— ನಿಮ್ಮ ವಿಚಾರ ತಪ್ಪದೆ, ರಾಜನು ಏನನ್ನೂ ಮಾಡಲಾರನು ರಾಜನ ಸರ್ವ ಶಕ್ತಿ ಪ್ರಜಗಳಲ್ಲಿರುವದು, ಪ್ರಜಗಳು ಎಲ್ಲಿಯವರೆಗೆ ಅವನ ಕೂಡಿರುವರೋ ಅಲ್ಲಿಯವರೆಗೆ ರಾಜನಲ್ಲಿ ಸರ್ವಶಕ್ತಿಗಳೂ, ಸಂಗ್ರಹವಾಗುವವು. ಪ್ರಜರು ರಾಜನನ್ನು ಬದಲು ಮಾಡಬಹುದು ರಾಜನು ಪ್ರಜರನ್ನು ಎಂದೂ ಬದಲು ಮಾಡಲಾರನು.

ಸಿಕಂದರ:- ಆದರೆ ಪ್ರಜರೇ ಫಿತೂರಿಗಾರರಾದರೆ ? ಅವರನ್ನು ರಾಜನು ಶಿಕ್ಷಿಸಲಾರನೇನು ?

ಪುರು:— ಫಿತೂರಿಗಾರರನ್ನು ರಾಜನು ಶಿಕ್ಷಿಸಬೇಕು, ನಿಜ. ಪ್ರಜರು ಫಿತೂರಿಗಾರರಾದರೂ ನಾಲ್ಕಾರು ಸಾವಿರ ಜನ ಆಗಬಹುದು. ಅವರನ್ನು ಶಿಕ್ಷಿಸಬಹುದು. ಆದರೆ ಎಲ್ಲ ಪ್ರಜರೇ ಆಗಲಿ, ಸೈನಿಕರೇ ಆಗಲಿ, ರಾಜನ ವಿರುದ್ಧ ಬಂಡೆದ್ದರೆ ಯಾರನ್ನು ಶಿಕ್ಷಿಸುವಿರಿ ? ಸೈನಿಕನು ನಿಮ್ಮ ಆಜ್ಞೆಯನ್ನೇ ಪಾಲಿಸದಿದ್ದರೆ, ರಾಜ ಏನು ಮಾಡುವನು ?

ಸಿಕಂದರ:— ಆದರೆ, ಮಹಾರಾಜ ಪೋರಸ್ ! ನಮ್ಮ ಸೈನ್ಯ ನಮ್ಮ ವಿರುದ್ಧವಿಲ್ಲ.

ಪುರು:— ರಾಜಾಧಿರಾಜ! ನಿಮ್ಮ ಸೈನ್ಯ ನಿಮ್ಮ ವಿರುದ್ಧ ಇರಲಿಕ್ಕಿಲ್ಲ. ಆದರೆ ನಿಮ್ಮ ಸೈನ್ಯದಲ್ಲಿ ಅಸಂತೋಷ ತುಂಬಿಕೊಂಡಿದೆ, ಸಿಟ್ಟು ತುಂಬಿಕೊಂಡಿದೆ, ಎಂದು ನಾನು ಕೇಳಿದ್ದೇನೆ. ಕೇಳಿದ್ದನ್ನು ಖಾತ್ರಿ ಕೂಡಾ ಮಾಡಿಕೊಂಡಿದ್ದೇನೆ.

ಸಿಕಂದರ:— ಆದರೂ ಅಡ್ಡಿಯಿಲ್ಲ. ಒಬ್ಬೊಬ್ಬ ಸೈನಿಕನ ಕುತ್ತಿಗೆ ಕತ್ತರಿಸಿ ಬಿಡುವೆನು ಒಂದು ವೇಳೆ ನಾನು ಕೈಯಲ್ಲಿ ಕಠಾರಿ ಹಿಡಿದರೆ ಆಗ ನನ್ನನ್ನು ಯಾರೂ ತಡೆಯರು ?

**ಪುರು**:— ನೀವು ರಾಜರಿರುವಿರಿ, ಚಾಂಡಾಲರಿಲ್ಲ ನೀವು ನಿಮ್ಮ ಎಲ್ಲ ಸೈನಿಕರ ಕುತ್ತಿಗೆ ಕತ್ತರಿಸಲಾರರಿ

**ಸಿಕಂದರ**:— ನಾನು ಕತ್ತರಿಸಬೇಕೆಂದರೆ.... .(ನಿಧಾನವಾಗಿ) ಯಾರು ತಡೆಯುವರು ?

**ಪುರು**:— ನಿಮ್ಮ ಮಿತ್ರ ಪೋರಸ್ ತಡೆಯುವನು. ಆಗ ನಿಮ್ಮ ಮಿತ್ರ ಪೋರಸ್‌ನಿಗೆ ನೀವು ಪ್ರತ್ಯುತ್ತರ ಕೊಡಲಿಕ್ಕಿಲ್ಲ.

**ಸಿಕಂದರ**:— (ಸಿಟ್ಟಿನಿಂದ) ನಿಮ್ಮ ವಿಚಾರ ತಪ್ಪಿದೆ. ನಿಮ್ಮ ಮಿತ್ರತ್ವ ನನ್ನನ್ನು ತಡೆಯಲಾರದು. ಒಂದು ವೇಳೆ ತಡೆದರೂ ಅದನ್ನು ಸರಿಸಿ ಮುನ್ನುಗ್ಗುವೆನು.

**ಪುರು**: — (ನಸುನಕ್ಕು) ಆದರೆ, ನನ್ನ ಸ್ನೇಹ ಹಿಂದೆ ಸರಿಯಲಾರದು. ಸಿಟ್ಟಿಗೂ ಏಳಲಾರದು, ನಿರಾಶವೂ ಆಗಲಾರದು. ಅದು ತನ್ನ ಕರ್ತವ್ಯವನ್ನು ಪೂರೈಸುವದು.

**ಸಿಕಂದರ**:— ಪುರುರಾಜ! ನಾನೀಗ ಸಿಟ್ಟಿನಲ್ಲಿರುವೆನು. ಸಿಟ್ಟಿನಲ್ಲಿದ್ದಾಗ ಯಾರ ಮಾತೂ ಕೇಳಲಾರೆನು, ಆದರೂ ನಿಮ್ಮ ಮಾತು ಕೇಳಿದ್ದೇನೆ.

**ಪುರು**:— ನಿಮಗೆ ನನ್ನ ಧನ್ಯವಾದಗಳು.

**ಸಿಕಂದರ**:— ಈ ಪ್ರಕರ್ಣವು ನನ್ನ ಮತ್ತು ನನ್ನ ಸೈನಿಕರದಿರುವದು. ಇದರಲ್ಲಿ ಕೈಹಾಕಲು ನೀವಾರು ?

**ಪುರು**:— ನಾನು ನಿಮ್ಮ ಮಿತ್ರ ಪುರು ಇದ್ದೇನೆ.

**ಸಿಕಂದರ**: — ನಿಮ್ಮ ಮಿತ್ರತ್ವವೇ ಬೇಡ ಅಂದರೆ ?

**ಪುರು**:— (ಎದ್ದು ನಿಲ್ಲುವನು) ಹಾಗಾದರೆ ನನಗೆ ಇಲ್ಲಿ ಸ್ಥಾನವಿಲ್ಲ. ಈ ಸಿಬಿರದಲ್ಲಿ ನನ್ನದೇನೂ ಕೆಲಸವಿಲ್ಲ.....ನಿಮ್ಮ ಸ್ಥಳವು ನನ್ನ ರಾಜ್ಯ ದಲ್ಲಿಲ್ಲ ! ನನ್ನ ರಾಜ್ಯದ ಹೊರಗಿದೆ. ಅಂಭಿರಾಜರ ರಾಜ್ಯದಲ್ಲಿದೆ. ನನ್ನ ರಾಜ್ಯದಲ್ಲಿದ್ದಿದ್ದರೆ !........

**ಅಂಭಿರಾಜ**:— ಪುರುರಾಜ ! ನಾನು ನಿನ್ನ ಸಂಬಂಧಿಕನಿದ್ದೇನೆ. ಭಾರತದವನಿದ್ದೇನೆ. ನಿಮ್ಮ ವೈರಿಗೆ, ನನ್ನ ರಾಜ್ಯದಲ್ಲಿಯೂ ಸ್ಥಾನವಿಲ್ಲ.

**ಪುರು**:— ( ಅಂಭಿರಾಜನನ್ನು ಕುರಿತು ) ನೀವು, ನನಗೆ ಆನಂದವನ್ನುಂಟು ಮಾಡಿದಿರಿ. ನಿಮ್ಮ ಸಾಹಸಕ್ಕೆ ನಾನು ಮೆಚ್ಚಿದೆ. (ಹೊರಗೆ

ಹೋಗುತ್ತ) ಮಹಾರಾಜಾ ಅಲೆಕ್ಸೆಂಡರ! ನನಗೆ ಅಪ್ಪಣೆ ಕೊಡ
ಬೇಕು. ಹೋಗಿ ಬರುವೆನು.

**ಸಿಕಂದರ:—** (ಮುಂದೆ ಬಂದು) ತಡೆಯಿರಿ ಮಹಾರಾಜ! ನೀವು ನನ್ನನ್ನು ತಪ್ಪು ತಿಳಕೊಂಡಿರಿ, ನನ್ನ ವಿಚಾರವನ್ನೇ ನೀವು ತಿಳ ಕೊಳ್ಳಲಿಲ್ಲ. ನಾನು ಸಿಟ್ಟಿನಲ್ಲಿದ್ದೆ.

**ಪುರು—:** ಯಾವನಪಾದರೂ ನಿಜರೂಪ ಕಾಣಬೇಕಾಗಿದ್ದರೆ; ಅದು ಸಿಟ್ಟಿ ನಲ್ಲಿಯೇ ಕಾಣುವದು. (ಹೋಗುತ್ತ ಹೋಗುತ್ತ) ನಮಸ್ಕಾರ!

**ಸಿಕಂದರ.—** (ಸಿಟ್ಟಿನಿಂದ) ನಮಸ್ಕಾರ!

**ಅಂಭಿರಾಜ:** (ಎದ್ದು ಹೋಗುತ್ತ) ನಮಸ್ಕಾರ! ನಾನೂ ಬರುವೆನು.

**ಸಿಕಂದರ.—** (ಸಿಟ್ಟಿನಿಂದ) ಶೆಲುಕ್ಯಸ!

(ಶೆಲುಕ್ಯಸನು ಮುಂದೆ ಬಂದು ಶರಣು ಮಾಡಿ ಸೈನ್ಯದ ಪದ್ಧತಿ ಯಂತೆ ನಿಲ್ಲುವನು)

**ಸಿಕಂದರ:—** (ಸಿಟ್ಟಿನ ಸ್ವರದಲ್ಲಿ) ಶೆಲುಕ್ಯಸ! ಪಿತೂರಿಗಾರರನ್ನು ಪತ್ತೆ ಹಚ್ಚಿದೆನು?

**ಶಲುಕ್ಯಸ:—** ನಿಮ್ಮ ಶೇವಕ ನಿಮ್ಮ ಆಜ್ಞೆಯಂತೆ ನಡೆದಿರುವನು.

**ಸಿಕಂದರ:—** ನನಗೆ ಮಾತು ಬೇಡ ಕೃತಿ ಬೇಕು. ಆ ಮನುಷ್ಯನನ್ನು ಮೊದಲು ಹಾಜರ ಮಾಡು. ಪಿತೂರಿಯ ಪ್ರಾಯಿಶ್ಚಿತ್ತವು; ಮರಣ. ಅದು ನನ್ನ ಕೈಯಿಂದ ಆಗಬೇಕು.

**ಹೊರಗಿನಿಂದ ಕೇಳಬರುವದು:-** ನಾನು ಹಾಜರಿದ್ದೇನೆ. (ರುಕ್ಸಾನಳು ಅನ್ನುವಳು)

**ಸಿಕಂದರ:—** ನೀನು ಯಾರು? ಎಲ್ಲಿರುವಿ? ಮುಂದೆ ಬಾ! ನನ್ನ ಮುಂದೆ ಬಾ!

(ರೆನಿಯಾಸ ದೇವಕುಲಿಸರು ರುಕ್ಸಾನಳನ್ನು ಕೈದಿಯಂತೆ ತರುವರು ಮತ್ತು ಸಿಕಂದರನ ಮುಂದೆ ನಿಲ್ಲಿಸುವರು. ಸಿಕಂದರನು ಆಕೆಯನ್ನು ನೋಡಿ ಬೆಚ್ಚಿಬೀಳುವನು)

**ಸಿಕಂದರ:—** ಯಾರು? ನೀ! (ಸಮೀಪ ಬಂದು) ಏನು ನೀನೂ ಇರು ವೆಯಾ!

**ರುಕ್ಸಾನಾ:—** ಇಲ್ಲ, ನಾನು ನಿಮ್ಮ ಸೈನ್ಯದಲ್ಲಿ ಒಡಕುಂಟು ಮಾಡಿಲ್ಲ ಫಿತೂರಿ ಮಾಡಿಲ್ಲ, ಆದ್ದರಿಂದ ನನಗೆ ಯಾವ ಭಯವೂ ಇಲ್ಲ. ಆದರೆ; ನನಗೆ ನಗೆ ಬರುತ್ತಿದೆ.

**ಸಿಕಂದರ:–** ನಿನ್ನ ನಗು ನೋಡಿದ ನಾನು ಹುಚ್ಚನಾಗುವೆನೆಂದು, ನಿನ್ನ ಭಾವನೆ ಏನು ? ನೀನು ಹುಚ್ಚಳಿದ್ದೀ ! ಸಿಕಂದರನನ್ನು ನೀನು ತಿಳಿದುಕೊಂಡಿಲ್ಲ, ನೋಡಿಕೊಂಡಿರುವಿ ಸಿಕಂದರನು ಸಾಮಾನ್ಯ ಸರದಾರನ ಮಗಳನ್ನು ಲಗ್ನವಾಗುವ ಧೈರ್ಯವೂ ಅವನಲ್ಲಿದೆ. ಆದರೆ ಅದೇ ಹುಡಿಗೆ ಆಜ್ಞೆ ಮೀರಿದರೆ, ತನ್ನ ಕೈಯಿಂದ ಆಕೆಯ ಕುತ್ತಿಗೆ ಕತ್ತರಿಸುವ ಕಠೋರ ಹೃದಯವೂ ಅವನಲ್ಲಿದೆ.

**ರುಕ್ಸಾನಾ:—** ಅದು ನನಗೆ ಸಂತೋಷ ನನ್ನ ಸಿಕಂದರನು ತನ್ನ ಕರ್ತವ್ಯ ಪೂರೈಸುವದರಲ್ಲಿ ಹಿಂದೆ ಸರಿಯನು. ಆದರೆ.... (ಮಾತು ಅರ್ಧಕ್ಕೆ ಮುಗಿಸುವಳು.)

**ಸಿಕಂದರ:—** ನೀನು ಏನು ಹೇಳಬೇಕೆಂದಿರುವಿಯೋ ಅದನ್ನು ಪೂರ್ತಿ ಹೇಳು.

**ರುಕ್ಸಾನಾ: —** (ಜನರ ಕಡೆಗೆ ಕೈಮಾಡಿ) ಇಲ್ಲಿ ಜನರಿರುವರು.

**ಸಿಕಂದರ:—** ಹೌದು, ನನಗೆ ಗೊತ್ತಿದೆ. ಆದರೆ ನೀನು ಇಲ್ಲೇ ಹೇಳ ಬೇಕು. ಏಕಾಂತದಲ್ಲಿ ಹೇಳುವದು ಬೇಡ. ಈಗ ನೀನು ಅಪರಾಧಿ ಇರುà.

**ರುಕ್ಸಾನಾ:—** ನಾನು ನಿಮ್ಮ ಸೈನಿಕರ ಫಿತೂರಿ ಮಾಡಿ, ನಿಮ್ಮ ಮುಂದಿನ ದಾಳಿಯನ್ನು ನಿಲ್ಲಿಸಿದ್ದೇನೆ. ನಿಜವಾಗಿ ವಿಚಾರ ಮಾಡಿದರೆ, ನಿಮ್ಮ ಮುಂದಿನ ದಾಳಿಯನ್ನು ನಿಲ್ಲಿಸಿಲ್ಲ. ನಾನು ನಿಲ್ಲಿಸಿದ್ದು; ನಿಮ್ಮ ಅಪಮಾನದ ಜೀವನ, ಅಪಮಾನದ ಮರಣ ಇವುಗಳನ್ನು ನಿಲ್ಲಿಸಿ ದ್ದೇನೆ

**ಸಿಕಂದರ:—** ನೀನು ಹುಚ್ಚಿ ಇದ್ದೀ, ನಿನಗೇನೂ ಗೊತ್ತಿಲ್ಲ. ಪೋರಸನು ಎಷ್ಟು ಶೂರನಿರುವನು ನಿನಗೆ ಗೊತ್ತಿದೆಯೆ ? ಆದರೂ ಅವನನ್ನು ನಾವು ಒಂದೇ ಒಂದು ದಿನದಲ್ಲಿ ಗೆದ್ದೆವು.

ರುಕ್ಸಾನಾಃ—ಮಹಾರಾಜ! ನಿಮ್ಮ ತಿಳುವಳಿಕೆ ತಪ್ಪಿದೆ, ಯುದ್ಧ ಮೈದಾನದಲ್ಲಿ, ನೀವು ಕುದುರೆಯಿಂದ ಕೆಳಗೆ ಬಿದ್ದಾಗ ಪುರುಷನ ಕೈಯ್ಯಲ್ಲಿ ಬಾಲೆ ಇತ್ತು. ಆಗ ನಿಮ್ಮನ್ನು ಯಾರು ಉಳಿಸಿದರು

ಸಿಕಂದರಃ— (ಅಭಿಮಾನದಿಂದ) ನನ್ನ ಶೌರ್ಯ! ನನ್ನ ನಸಿಬ!

ರುಕ್ಸಾನಾಃ– ಇಲ್ಲ, ಮಹಾರಾಜ! ಇಲ್ಲ. ಆಗ ನಿಮ್ಮ ನಸಿಬ ನುಚ್ಚುನೂರಾಗಿತ್ತು! ನಿಮ್ಮ ಶೌರ್ಯ ಸುಸ್ತಾಗಿತ್ತು! ಆಗ ನಿಮ್ಮ ಹತ್ತಿರ! ಏನಿತ್ತು? ನಿಮ್ಮ ಕೈಯ್ಯಲ್ಲಿ ಕಠಾರಿ ಇದ್ದಿಲ್ಲ! ನಿಮ್ಮ ಸೈನಿಕರು ನಿಮ್ಮ ಹತ್ತಿರಿರಲಿಲ್ಲ! ನಿಮ್ಮ ಕುದುರೆ ಇರಲಿಲ್ಲ! ಆಗ ನಿಮ್ಮ ಹತ್ತಿರಿದ್ದದ್ದು, ಒಂದೇ ಒಂದು. ಅದು ಕೇವಲ ರುಕ್ಸಾನಳ ಪ್ರೇಮ ಮಾತ್ರ. ಅದೇ ನಿಮ್ಮನ್ನು ಉಳಿಸಿದ್ದು.

ಸಿಕಂದರ:– ಮೂರ್ಖರಂತೆ ಮಾತಾಡಬೇಡ! ಏನು ಹೇಳಬೇಕೆಂದಿರುವಿಯೋ ಅದನ್ನು ಸ್ಪಷ್ಟವಾಗಿ ಹೇಳು!

ರುಕ್ಸಾನಾಃ— ನಾನು ಹೇಳುವ ಮಾತು ಕೇಳಿದರೆ, ನೀವು ನಾಚಿಕೆಯಿಂದ ತಲೆತಗ್ಗಿಸುವಿರಿ. ಅದನ್ನು ಕೇಳಿದ ನಿಮ್ಮ ಗುಲಾಮರು ಸಹ ನಿಮ್ಮ ವೈರಿಯ ಪೌರುಷ ಮಾಡಬಹುದು. ಆದ್ದರಿಂದ (ಅಂಭಿರಾಜ ಶೆಲ್ಯುಕ್ಯಸ ವಗೈರೆರ ಕಡೆಗೆ ಕೈಮಾಡಿ) ಅದನ್ನು ಇವರ ಮುಂದೇ ಕೆಳಬೇಕೆನ್ನುವಿರೋ, ಒಬ್ಬರೇ ಕೇಳಬೇಕೆನ್ನುವಿರೋ ಹೇಳಿರಿ!

ಶೆಲ್ಯುಕ್ಯಸಃ— ಚಕ್ರವರ್ತಿಗಳೇ! ನಿಮ್ಮ ಗುಲಾಮರಾದ ನಾವು ಅಂಥ ಮಾತುಗಳನ್ನು ಕೇಳುವ ಅವಶ್ಯಕತೆಯಿಲ್ಲ. ಆದ್ದರಿಂದ ನಮಗೆ ಹೋಗಲು ಅಪ್ಪಣೆ ಕೊಡಿರಿ.

ಸಿಕಂದರಃ— ಅಡ್ಡೀ ಇಲ್ಲ, ನೀವು ಹೋಗಬಹುದು

( ಶೆಲ್ಯುಕ್ಯಸ, ಯಮುನೀಸ, ದೇವಕುಲಸ, ರೇನಿಯಾಸರೆಲ್ಲರೂ ಶರಣು ಮಾಡಿ ಹೊರಟು ಹೋಗುವರು. ಸಿಕಂದರನು ಅತ್ತಿತ್ತ ಅಡ್ಡಾಡುತ್ತ ರುಕ್ಸಾನಳ ಎದುರು ಬಂದು ನಿಲ್ಲುವನು. ರುಕ್ಸಾನಳು ಯುನಾನದ ಪದ್ಧತಿಯಂತೆ ಶರಣುಮಾಡಿ ನಿಂತುಕೊಳ್ಳುವಳು.)

ಸಿಕಂದರಃ— ಈಗ ಹೇಳು! ಏನು ಹೇಳತಿ ಹೇಳು?

ರುಕ್ಸಾನಾಃ—ಪುರುರಾಜನನ್ನು ನೀವು ಗೆದ್ದಿಲ್ಲ. ಪುರುರಾಜನೇ ನಿಮ್ಮನ್ನು ಜೀವದಿಂದ ಉಳಿಸಿದ್ದಾನೆ. ಯಾಕಂದರೆ ಅವನು; ನನ್ನನ್ನು ತನ್ನ

ತಂಗಿ ಎಂದು ಒಪ್ಪಿಕೊಂಡನು ಯಾವಾಗ ಅವನು ಯುದ್ಧಕ್ಕಾಗಿ ಆಗ ಹೊರಟು ನಿಂತನೊ,ಅವನು ನನಗೆ ಹೀಗೆ ಕೇಳಿದನು:- ನೀನು ನನ್ನ ತಂಗಿಯಾಗಿರುವಿ, ಆದ್ದರಿಂದ ನಿನಗೇನು ಬೇಕು ಕೇಳಿಕೊ! ಕೊಡುವೆನು ಎಂದನು.

**ಸಿಕಂದರಃ**— ನೀನೇನು ಕೇಳಿದಿ?

**ರುಕ್ಸಾನಾಃ**— ಸಿಕಂದರ ಜೀವದಿಂದುಳಿಯಬೇಕು, ಎಂದು ಕೇಳಿದೆ. ಅವರಂತೆ ಅವನು, ನನಗೆ ವಚನ ಕೊಟ್ಟನು. ನೀವು ಅವನ ಕೈಯಲ್ಲಿ ಸಿಕ್ಕಾಗ, ಅವನು ನಿಮಗೆ ಕೊಲ್ಲಲು ಶಕ್ಯವಿತ್ತು. ಆದರೆ; ಆಗವನಿಗೆ, ನನಗೆ ಕೊಟ್ಟ ವಚನದ ನೆನಪು ಬಂತು. ಆಗ ಅವನ ಕೈ ಎಲ್ಲಿತ್ತೋ ಅಲ್ಲೇ ನಿಂತುಬಿಟ್ಟಿತು. ನೀವು ಜೀವದಿಂದುಳಿದಿರಿ...... ಆ ಮೇಲೆ ಯುದ್ಧದ ಪರಿಣಾಮ ಬದಲಾಯಿತು. ನೀವು ಗೆದ್ದಿರಿ. ಅವನು ಸೋತನು.

**ಸಿಕಂದರ:**— (ಆಕಾಶದ ಕಡೆಗೆ ಮುಖಮಾಡಿ) ಪೋರಸ! ಈ ವರೆಗೆ ನಿನ್ನನ್ನು ಶೌರ್ಯಶಾಲಿಯೂ, ಧೈರ್ಯಶಾಲಿಯೂ, ಎಂದಿಷ್ಟೇ ತಿಳಿದಿದ್ದೆ. ಆದರೆ ನೀನು ನನ್ನ ತಿಳುವಳಿಕೆಗೆ ಸಿಲುಕದ ಮಹಾ ವ್ಯಕ್ತಿ ಇರುವಿ. ನೀನು ಮಹಾತ್ಮನಿರುವಿ, ದೇವದೂತನಂತಿರುವಿ. ನಿನ್ನಂಥ ವ್ಯಕ್ತಿಗಳು ಮೇಲಿಂದ ಮೇಲೆ ಹುಟ್ಟಲಾರರು. ನೂರಾರು ವರ್ಷಗಳಿಗೊಬ್ಬರು ಬರುವರು, ಬಂದವರು ಹೋಗುವಾಗ ಮಾನವ ಜನಾಂಗಕ್ಕೆ ಮಾರ್ಗದರ್ಶನ ಮಾಡಿ ಹೋಗುವರು... ಜಗತ್ತಿನ ಜನಾಂಗದ ಪರವಾಗಿ ನಿನಗೆ ನನ್ನ ಅನಂತ ವಂದನೆಗಳು

**ರುಕ್ಸಾನಾ:**— ಅನಂತರ ಪುನಃ ಮುಂದಿನ ರಾಜ್ಯದ ಮೇಲೆ ದಾಳಿ ಮಾಡಲು ನೀವು ಅಣಿಯಾಗಿರುವಿರೆಂದು ನನಗೆ ತಿಳಿಯಿತು. ಆಗ ನನಗೆ ಅಳು ಬಂದಿತು. ನಾನು ಮಾಡಿದ ಶ್ರಮಕ್ಕೆ ಫಲ ಸಿಕ್ಕಿತು, ಆದರೆ ಸುಖ ಸಿಗಲಿಲ್ಲ ಎಂಬ ಕೊರಗು ನನ್ನ ಮನ ಕೊರೆಯಹತ್ತಿತು... ಡೆಯಿತು. ಪುರು ರಾಜನಕಿಂತಲೂ ಹೆಚ್ಚಿನ ಶಕ್ತಿಶಾಲಿಗಳನ್ನೂ, ಶೂರರನ್ನೂ ತಾವು ಎದುರಿಸಬೇಕಾಗುವದು. ಅವರಿಂದ ತಾವು ಪಾರಾಗಲು ಶಕ್ಯವಿಲ್ಲ. ಎಂದು ಅನಿಸಿತು. ಆಗ ನನ್ನ ಮೈಜುಂ

ಎಂದಿತು. ಆಡಿದ ಸುಖಆಗಲಿಲ್ಲ,ನೋಡಿದ ವಸ್ತು ಸಿಗಲಿಲ್ಲ. ಎಂದು ನನ್ನ ಹೃದಯ ಹೇಳತೊಡಗಿತು. ನೀವು ದಾಳಿಮಾಡಿದ್ದೇ ಆದರೆ, ಸೋಲು ಮತ್ತು ಅಪಮಾನ, ಅಪಮಾನದಜೀವನ ಅಥವಾ ಮರಣ ಇವುಗಳು ನಿಮ್ಮನ್ನು ಎದುರುಗೊಳ್ಳುವವು. ಅವುಗಳಿಂದ ದೂರಿರಲು ನಿಮ್ಮನ್ನು ಕೇಳಿಕೊಂಡರೆ;ನೀವು ಒಪ್ಪುತ್ತಿರಲಿಲ್ಲ. ಜಗತ್ತನ್ನೇ ಗೆದೆಯಬೇಕೆಂದು ಆಶೆ ಮಾಡಿರುವಿರಿ. ಅದನ್ನು ಪೂರೈಸಲು ನಿಮ್ಮ ಜೀವವನ್ನೇ ಪಣಕ್ಕೆ ಹಚ್ಚುವಿರೇ ಹೊರ್ತು ಹಿಂದೆ ಸರಿಯಲಾರರಿ. ಇದೂ ನನಗೆ ಗೊತ್ತು. ಅತ್ತ ...

**ಸಿಕಂದರ:—** ಮತ್ತೇನು ?

**ರುಕ್ಸಾನಾ:—** ಸಾತ್ವಿಕ ಅಣ್ಣನಾದ ಪುರುರಾಜನ ಜೀವನದಲ್ಲಿ, ಈ ಸೋಲಿನಿಂದ ಕತ್ತಲೆ ಕವಿದುಕೊಂಡಿದೆ. ಅವನು ಬದುಕಿನಲ್ಲಿ ಬೇಸರಗೊಂಡಿದ್ದಾನೆ. ದಿನದಿನಕ್ಕೂ ಸೊರಗುತ್ತಿದ್ದಾನೆ. ಈಗ ನನ್ನೆದುರು ಎರಡು ಕಾರ್ಯಗಳು ಕಾದು ನಿಂತಿವೆ. ಒಂದು, ನೀವು ಬದುಕಿ ಬಾಳಬೇಕು. ಇನ್ನೊಂದು, ಪುರುರಾಜನು ಆನಂದದಿಂದ ಅಡ್ಡಾಡಬೇಕು. ಇವೆರಡೂ ಒಂದೇ ಕಾರಣದಿಂದ ಆಗಬೇಕಾಗಿತ್ತು. ಅದಕ್ಕಾಗಿ ಇದರ ಹೊರ್ತು ಬೇರೇ ಮಾರ್ಗವೇ ಉಳಿಯಲಿಲ್ಲ. ಈಗ ನನ್ನ ಕೆಲಸ ಪೂರೈಸಿತು. ಇನ್ನು ನನಗೆ ಶಿಕ್ಷೆ ವಿಧಿಸಬಹುದು.

(ಹೊರಗೆ ಗದ್ದಲವಾಗತೊಡಗುವದು, ಅದನ್ನು ಕೇಳಿ ಸಿಕಂದರನು ಅಡ್ಡಾಡತೊಡಗುವನು. ಗದ್ದಲ ಹೆಚ್ಚಾಗತೊಡಗುವದು. ಕುತೂಹಲ ದೃಷ್ಟಿಯಿಂದ ಬಾಗಿಲ ಕಡೆಗೆ ನೋಡತೊಡಗುವನು. ಆಗ ಶೆಲುಕ್ಯಸನು ಬಂದು ಸಲಾಮು ಮಾಡಿ ನಿಂತುಕೊಳ್ಳುವನು )

**ಸಿಕಂದರ:—** ಹೊರಗೆ ಗದ್ದಲ ಯಾರು ಮಾಡುವರು ? ಅವರು ನಮ್ಮ ಸೈನಿಕರಿದ್ದರೆ ಅವರಿಗೆ ಹೇಳು ! ನಿಮ್ಮ ಬಾದಶಹನು ನಿಮಗೆ ನಾಳೆ ಭೆಟ್ಟಿಯಾಗುವನೆಂದು.

**ಶಲುಕ್ಯಸ:—** ಸಿಪಾಯಿಯರು ಇವರನ್ನು ( ರುಕ್ಸಾನಳತ್ತ ಕೈಮಾಡಿ ) ಬಡಿಸಿಕೊಳ್ಳಲು ಬಂದಿದ್ದಾರೆ. ಅವರನ್ನುವರು! ಮೊದಲು ನಾವು ಸಾಯುವೆವು,ನಂತರ ಇವರು ಸಾಯಲಿ,ಅನ್ನುತ್ತಿರುವರು. ಮತ್ತು....

**ಸಿಕಂದರ:**— (ನಡುವೆ ಮಾತಾಡುತ್ತ) ಅವರ ಇಪ್ಪತ್ತು ಜನರನ್ನು ಒಳಗೆ ಬಿಡು. ಅವರ ಹತಿಯಾರವು ಅವರಲ್ಲಿರಲಿ. ಅವರು ಇಂದಿನ ವರೆಗೆ ನೋಡಿರದ ಸಿಕಂದರನನ್ನು ಇಂದು ನೋಡಲಿ !

(ಶೆಲ್ಯುಕ್ಯಸನು ತಲೆಬಾಗಿ ಹೊರಟು ಹೋಗುವನು. ಸಿಕಂದರನು ನೆಟ್ಟಿದು ನಿಲ್ಲುವನು. ಮತ್ತು ರುಕ್ಸಾನಳಿಗೆ ಆಜ್ಞೆ ಮಾಡುವನು.)

**ಸಿಕಂದರ:**— ತರುಣೀ ! ನೀನು ಮಾಡಿದ ತಪ್ಪಿಗಾಗಿ ನಿನಗೆ ಶಿಕ್ಷೆ ವಿಧಿಸುವೆನು. ನೀನು ನನ್ನ ಸಮೀಪ ಬಾ, (ರುಕ್ಸಾನಳು ಮುಂದೆ ಬರುವಳು) ಇನ್ನೂ ಮುಂದೆ ಬಾ, (ರುಕ್ಸಾನಳು ಮತ್ತೆ ಮುಂದೆಬರುವಳು) ಮತ್ತೂ ಮುಂದೆ ಬಾ (ರುಕ್ಸಾನಳು ಸಿಕಂದರನ ಅತೀ ಸಮೀಪಕ್ಕೆ ಹೋಗಿ ನಿಲ್ಲುವಳು. ಸಿಕಂದರನು ಆಕೆಯ ಎರಡೂ ಭುಜದ ಮೇಲೆ ಕೈಯಿಟ್ಟು ಜಗ್ಗಿಕೊಳ್ಳುವನು. ರುಕ್ಸಾನಳು ಹೆದರಿ ಕಣ್ಣು ಮುಚ್ಚಿಕೊಳ್ಳುವಳು. ಸಿಕಂದರನು ಒಮ್ಮೆಲೇ ಆಕೆಯನ್ನು ತನ್ನ ಎದೆಗೆ ಅವಚಿಕೊಳ್ಳುವನು ರುಕ್ಸಾನಳು ಕಣ್ತೆರದು ನೋಡಿ ಆಶ್ಚರ್ಯಪಡುವಳು. ಮತ್ತು ಹಿಂದೆ ಸರಿಯುವಳು. ಆದರೂ ಸಿಕಂದರನ ಬಾಹುಪಾಶದಲ್ಲಿರುವಳು ಸಿಕಂದರನು ಪ್ರೀತಿಯಿಂದ ಆಕೆಯ ಡುಬ್ಬದ ಮೇಲೆ ಕೈಯಾಡಿಸುತ್ತ)

**ಸಿಕಂದರ:**— ನೀನು ರುಕ್ಸಾನಳಲ್ಲ. ನೀನು ನನ್ನ ರೆಕ್ಸನೀಜ ಇರುವಿ ನನ್ನ ಜೀವ ಉಳಿಸಿರುವಿ. ನಿನ್ನ ಕಾರ್ಯದಿಂದ ನನಗೆ ಸಂತೋಷವಾಗಿದೆ ನಿನಗೇನು ಬೇಕು ಹೇಳು ? ಕೊಡುವೆನು. ಇಂದು, ನಿನ್ನ ಪ್ರತಿಯೊಂದು ಬೇಡಿಕೆಯನ್ನೂ ಪೂರೈಸಿಕೊಡುವೆನು.

**ರುಕ್ಸಾನಾ:**- (ಸಿಕಂದರನ ಬಾಹು ಬಂಧನದಿಂದ ಬಿಡಿಸಿಕೊಂಡು, ನಸುನಕ್ಕು ಪೈಯಾರದಿಂದ ತಲೆಬಾಗಿ) ಸುಕ್ರಿಯಾ ! (ಆಜ್ಞಾಧಾರಕನ ಅನುಜ್ಞೆ.)

**ಸಿಕಂದರ:**— (ಸಂತೋಷಭರಿತನಾಗಿ) ರೆಕ್ಸನೀಜ! ನಿನ್ನಿಂದ ಈ ಮುದುಕರ ಮಮತೆ ಬೇಕಾಗಿಲ್ಲ. ತಾರುಣ್ಯದ ತಂತು ಬೇಕು !

**ರುಕ್ಸಾನಾ:**— (ಗಂಭೀರತೆಯಿಂದ) ನಾನು ನನ್ನ ಇನಾಮು ಕೇಳುವೆನು.

**ಸಿಕಂದರ:**— ( ತನ್ನ ತೊಡೆಗೆ ತನ್ನ ಕೈ ಹೊಡೆದು ) ಕೇಳು! ಏನು ಕೇಳುತ್ತೀ ಕೇಳು ?

**ರುಕ್ಸಾನಾ:**— ನನ್ನ ಮೊದಲನೇ ಬೇಡಿಕೆ, ಸೈನಿಕರ ತಪ್ಪನ್ನು ಕ್ಷಮಿಸ ಬೇಕು.

**ಸಿಕಂದರ:**— ಒಳ್ಳೇದು ! ಎರಡನೇದು ?

**ರುಕ್ಸಾನಾ:**— ಎರಡನೇ ಬೇಡಿಕೆಯು, ಮುಂದಿನ ದಾಳಿಯನ್ನು ರದ್ದು ಮಾಡಿ ಸೈನ್ಯ ಸ್ವದೇಶಕ್ಕೆ ತೆರಳಲು ಆಜ್ಞೆ ಮಾಡಬೇಕು.

**ಸಿಕಂದರ:**— ಆಗಲಿ ! ಮೂರನೇ ಬೇಡಿಕೆ ?

**ರುಕ್ಸಾನಾ:** — ಮೂರನೇ ಬೇಡಿಕೆ, ಪುರುರಾಜನು ನನ್ನ ಅಣ್ಣನಿರುವನು ಆದ್ದರಿಂದ....

**ಸಿಕಂದರ:** (ಮಾತು ಮುರಿದು) ನೀನು ಪೋರಸನನ್ನು ಹೊಗಳಬೇಡ. ನಿನ್ನ ಬೇಡಿಕೆಗಳೆಲ್ಲವೂ ಪೂರೈಸುವವು ಪೋರಸನ ಹೊಗಳಿಕೆ ಯನ್ನು ಎರಡನೇಯವರಿಂದ ಕೇಳುವದು ನನಗೆ ಬೇಕಾಗಿಲ್ಲ.

**ರುಕ್ಸಾನಾ:**— ಯಾಕೆ ಮಹಾರಾಜ ?

**ಸಿಕಂದರ:**— ಪೋರಸನನ್ನು ಯಾರ್‍ಯಾರು ಹೊಗಳುವರೋ ಅವರೆಲ್ಲರಿ ಗಿಂತಲೂ ನನಗೆ, ಅವನ ವ್ಯಕ್ತಿತ್ವವು ಹೆಚ್ಚು ಗೊತ್ತಿದೆ. ಪೋರಸನ ಮೇಲೆ ನನಗೆ ಸಿಟ್ಟಿಲ್ಲ. ಪೋರಸನು ಮಹಾವ್ಯಕ್ತಿ ಇರುವನು. ಅವ ನಿಗಾಗಿ ನನ್ನಲ್ಲಿ ಯಾವಾಗಲೂ ಪೂಜ್ಯತೆ ಇದೆ. ಅವನ ವ್ಯಕ್ತಿತ್ವವು ನಮ್ಮೊಡನೆ ಯುನಾನದ ವರೆಗೆ ಬರುವದು.

**ರುಕ್ಸಾನಾ:**— (ನಸುನಕ್ಕು ಓರೆಗಣ್ಣಿನಿಂದ ನೋಡಿ) ಸುಕ್ರಿಯಾ! (ನಿಮ್ಮ ಆಶೀರ್ವಾದ !)

(ಅಷ್ಟರಲ್ಲಿ ಶೆಲುಕ್ಯಸ ಮತ್ತು ಇಪ್ಪತ್ತು ಜನ ಸಿಪಾಯಿಯರು ಬರು ವರು. ಅವರ ಮುಖ ಗಂಭೀರವಿರುವದು.)

**ಸಿಕಂದರ:**— ಏಕೆ ಬಂದಿರಿ ! ಈಗ ನನ್ನ ವಿಶ್ರಾಂತಿಯ ವೇಳೆ ಇದೆ ಎನ್ನುವದು ನಿಮಗೆ ಗೊತ್ತಿಲ್ಲವೆ ?

**ಒಬ್ಬಸಿಪಾಯಿ:** (ಸಿಟ್ಟಿನಿಂದ) ಚಕ್ರವರ್ತಿಗಳು (ರುಕ್ಸಾನಳ ಕಡೆಗೆ ಕೈ ಮಾಡಿ) ಇವರನ್ನು ನೀವು ದಸ್ತಗಿರಿ ಮಾಡೀರ್‍ಯಾ ?

ಸಿಕಂದರ:— ಹೌದು ಮಾಡಿರುವೆನು.

ಸಿಪಾಯಿ:— (ಹೆಚ್ಚು ಸಿಟ್ಟಿನಿಂದ) ಅವರಿಗೆ ಶಿಕ್ಷೆ ಮಾಡತೀರಿ ?

ಸಿಕಂದರ:— ಹೌದು ಮಾಡುತ್ತೇನೆ.

ಸಿಪಾಯಿ:— (ಹೆದರಿಸುವಂತೆ) ಹಾಗ ಮಾಡಿದ್ರೆ ಏನಾಗ್ತೈತಿ ನಿಮಗ ಗೊತ್ತೆ ?

ಸಿಕಂದರ:— ಏನಾಗುವದು ?

ಸಿಪಾಯಿ:— ಸೈನ್ಯ ಒಡೆದು ಹೋಗುವದು.

ಸಿಕಂದರ:— (ನಗುತ್ತ) ಹಾಗೇ ಆಗಲಿ.

ಸಿಪಾಯಿ:— ವಿಚಾರಾ ಮಾಡ್ರಿ.

ಸಿಕಂದರ:— ( ಒಮ್ಮೆಲೇ ಧ್ವನಿ ಬದಲಾಯಿಸಿ ) ವಿಚಾರ ಮಾಡುವ ಅವಶ್ಯಕತೆಯಿಲ್ಲ. ನಿಮ್ಮ ಬಾದಶಹನು ನಿಮ್ಮೆಲ್ಲರಿಗೂ ಸ್ವದೇಶಕ್ಕೆ ಹೋಗಲು ಅಪ್ಪಣೆ ಕೊಡುವನು. ಆದರೆ ಅವನು ಸ್ವತಃ ಇಲ್ಲೇ ಇದೇ ಡೇರೆಯಲ್ಲಿ ಬಿದ್ದಿರುವನು. ಆಗವನು ಅನ್ನ ನೀರುಗಳನ್ನು ಮುಟ್ಟಲಾರನು, ಅವನು ಸಾಯುವದನ್ನು ಇದೇ ಸ್ತ್ರೀಯು ತನ್ನ ಕಣ್ಮುಟ್ಟ ನೋಡುವಳು.

ರುಕ್ಸಾನಾ:— ಮಹಾರಾಜ, ಏನಂದಿರಿ ?

ಸಿಕಂದರ:— ಶೆಲುಕ್ಯಸ ! ಅವರಿಗೆ ಹೊರಗೆ ಹೋಗಲು ಹೇಳು. ಅವರು ಏನು ಕೇಳುತ್ತಿದ್ದರೋ ಅದು ಅವರಿಗೆ ಈಗ ಸಿಕ್ಕಿತು ಇನ್ನವರಿಗೆ ನಾನು ಆಜ್ಞೆ ಮಾಡುವದಾಗಲೀ ಕೊಡುವದಾಗಲೀ ನನ್ನಲ್ಲೇನೂ ಉಳಿದಿಲ್ಲ.

(ಶೆಲುಕ್ಯಸ ಮತ್ತು ಸಿಪಾಯಿಯರು ಸುಮ್ಮನೇ ಹೊರಗೆ ಹೋಗುವರು. ರುಕ್ಸಾನಳು ಸಿಕಂದರನ ಹತ್ತಿರ ಹೋಗಿ ದುಃಖಪೂರಿತ ಸ್ವರದಿಂದ)

ರುಕ್ಸಾನಾ:— ಮಹಾರಾಜ ! ಸ್ವಲ್ಪ ಆಲೋಚನೆ ಮಾಡಿರಿ.

ಸಿಕಂದರ:— ನೀನು ನನ್ನ ಜೀವ ಉಳಿಸಿದಿ, ನಾನು ನಿನ್ನ ಬೇಡಿಕೆಗೆ ಒಪ್ಪಿಕೊಂಡೆ, ಲೆಕ್ಕ ಸರಿಯಾಯಿತು. ಈಗ ಮತ್ತೇನು ಬೇಕು ? ನನ್ನ ಸಿಪಾಯಿಯರಿಂದಲೇ ನಾನು ಸೋಲನ್ನೊಪ್ಪಿಕೊಂಡು ಸುಮ್ಮ ನಿರಬೇಕೆ ? ಅಥವಾ ಆ ಸೋಲನ್ನು ನಿನ್ನ ಪ್ರೇಮದಲ್ಲಿ ಮರೆತು ಬಿಡಬೇಕೆ ಹೇಗೆ ? ಇದು ಶಕ್ಯವಿಲ್ಲ.

**ರುಕ್ಸಾನಾ:—** ಮಹಾರಾಜ ! ಜೀವನದಲ್ಲಿ ಕೇವಲ ಗೆಲುವುಗಳೇ ಇರುವದಿಲ್ಲ. ಸೋಲುಗಳೂ ಇರುವವು. ಗೆಲುವಿನಿಂದ ಮಾನವನಲ್ಲಿ ಅಹಂಕಾರ ಬರುವದು. ಸೋಲಿನಿಂದ ಅಹಂಕಾರ ಅಳಿದು ಪ್ರೇಮ ಮತ್ತು ಪ್ರೀತಿಗಳು ಬೆಳೆದು ಬರುವವು.

**ಸಿಕಂದರ:—** ಸೈನಿಕನು, ಪ್ರೇಮ ಮತ್ತು ಪ್ರೀತಿಗಳ ಬೆನ್ನು ಹತ್ತುವಂತಿಲ್ಲ. ಕ್ರೋಧ ಮತ್ತು ಕಠೋರತೆಗಳು ಅವನ ರೋಮ ರೋಮದಲ್ಲಿ ರೂಪಗೊಂಡಿರಬೇಕು, ಎಂದು ಸೈನಿಕ ನಿಯಮವಿದೆ.

**ರುಕ್ಸಾನಾ:—** ಮಹಾರಾಜ ! ನೀವು ರಾಜಾಧಿರಾಜರಿರುವಿರಿ,

**ಸಿಕಂದರ:—** ನೀನನ್ನುವದೂ ನಿಜ. ಆದರೆ ನಾನು ಕೇವಲ ರಾಜನೇ ಇಲ್ಲ, ಸೈನಿಕನೂ ಇದ್ದೇನೆ. ನನ್ನಲ್ಲಿ ಸೈನಿಕ ಶಕ್ತಿ ಮುಕ್ಕಾಲು ಭಾಗವಿದೆ. ರಾಜಶಕ್ತಿ ಕಾಲುಭಾಗವಿದೆ. ಆದ್ದರಿಂದ ನಾನು ಸೈನಿಕ ನಿಯಮ ಮನ್ನಿಸಬೇಕಾಗುವದು.

(ರಂಗಭೂಮಿಯ ಮೇಲೆ ಕತ್ತಲೆಯಾಗುವದು. ಕತ್ತಲೆಯಲ್ಲಿ ಸಿಕಂದರನು ನರಳುತ್ತಿರುವ ಧ್ವನಿ ಕೇಳಿಬರುವದು. ಪುನಃ ರಂಗ ಭೂಮಿಯ ಮೇಲೆ ಬೆಳಕಾಗುವದು. ಆಗ ಸಿಕಂದರನು ಒಂದು ಮಂಚದಮೇಲೆ ದಿಂಬಿಗೊರಗಿ ಕೂತದ್ದು ಕಂಡುಬರುವದು. ಅವನ ಹಣೆಗೆ ತಂಣೀರಿನ ಪಟ್ಟಿ ಇದೆ ಅವನು ನಿಶ್ಶಕ್ತನೂ ಉದಾಸನೂ ಆಗಿರುವನು. ಅವನೆದುರು ರುಕ್ಸಾನಾ, ಶೆಲುಕ್ಯಸ, ಯಮುನೀಸ, ಮತ್ತು ಅಂಭಿರಾಜರು ಇರುವರು.

**ಸಿಕಂದರ:—** ಶೆಲುಕ್ಯಸ್ ! ನಮ್ಮ ಸೈನಿಕರು ನಮ್ಮ ಆಜ್ಞೆಯನ್ನು ಪಾಲಿಸಲಿಲ್ಲ. ಮುಂದೂ ಪಾಲಿಸುವಂತೆ ಕಾಣುವದಿಲ್ಲ. ಅವರನ್ನು ನಂಬಿ ನಾಹಾ ಆಶೆಯಿಂದ ಅವರೊಡನೆ ಹಿಂದುಸ್ಥಾನಕ್ಕೆ ಬಂದದ್ದು ನನ್ನ ತಪ್ಪು. ಇನ್ನು ಮೇಲೆ ಅವರು ನಮ್ಮ ಸೈನಿಕರಲ್ಲ. ನಾನು ಅವರ ರಾಜನಲ್ಲ. ಇಂದಿನಿಂದ ಪ್ರತಿ ಸೈನಿಕನೂ ಸ್ವತಂತ್ರನಾಗಿರುವನು. ತಮ್ಮ ತಮ್ಮ ಇಚ್ಛೆ ಬಂದಲ್ಲಿಗೆ ಹೋಗಲು ನೀನವರಿಗೆ ಹೇಳಿಬಿಡು.

**ಶೆಲುಕ್ಯಸ:—** ಮಹಾರಾಜ ! ನೀವು, ಎಂಟು ದಿನಗಳಿಂದ ಅನ್ನ ನೀರುಗಳನ್ನು ಬಿಟ್ಟದ್ದರಿಂದ, ನಿಮ್ಮ ಪ್ರಕೃತಿ ಬಹಳ ನಿಸ್ಸತ್ವವೂ

ನಿಸ್ತೇಜವೂ ಆಗಿದೆ. ಈ ನಿಮ್ಮ ಸ್ಥಿತಿ ನೋಡಿ ನಿಮ್ಮ ಸೇವಕರು ಗಾಬರಿಯಾಗಿದ್ದಾರೆ.

**ಸಿಕಂದರಃ**— ಸುಳ್ಳು ಹೇಳುತ್ತಿ! ಈಗ ಯಾರೂ ನಮ್ಮ ಸೇವಕರಾಗಿಲ್ಲ. ಎಲ್ಲರೂ ಸ್ವತಂತ್ರರಾಗಿರುವರು. ಅವರು ನಮ್ಮ ಸೇವಕರಾಗಿದ್ದರೆ ನನ್ನನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದರು

**ಶೆಲುಕ್ಯಸ:**— ಮಹಾರಾಜ ! ಅವರೀಗ ಇಬ್ಬಗೆಯ ಸಂಕಟದಲ್ಲಿದ್ದಾರೆ. ಅವುಗಳ ನಿವಾರಣೆಗಾಗಿ ಆಲೋಚಿಸುತ್ತಿದ್ದಾರೆ.

**ಸಿಕಂದರ:** — ಇಬ್ಬಗೆಯ ಸಂಕಟಗಳಾವವು ?

**ಶೆಲುಕ್ಯಸ:**— ತಮ್ಮ ತಪ್ಪನ್ನೊಪ್ಪಿಕೊಂಡು ಮಹಾರಾಜರ ಆಜ್ಞೆಯಂತೆ ಮುಂದಿನ ದಾಳಿಗೆ ಅಣಿಯಾದರೆ, ತಮ್ಮ ಮನಿಯುವರನ್ನು ಕಾಣು ವಂತಿಲ್ಲ. ಮನಿಯುವರನ್ನು ಕಾಣ ಹೊರಟರೆ, ಪುನಃ ಬಾದಶಹ ನನ್ನು ಕಾಣುವಂತಿಲ್ಲ. ಹೀಗಿರುವದರಿಂದ ಹ್ಯಾಗೆ ಮಾಡಬೇಕು ಎಂದು ಆಲೋಚಿಸುತ್ತಿದ್ದಾರೆ. ಅವರು ಬಹುಶಃ ತಮ್ಮ ಆಜ್ಞೆ ಯಂತೆ ನಡೆಯಲು ಒಪ್ಪಿಕೊಳ್ಳಬಹುದು. ಈ ವಿಷಯ ನಿರ್ಣಯಿ ಸಲು ಇಂದವರು ಸಭೆಗೂಡಲಿರುವರು.

**ಸಿಕಂದರ:**— ಹಾಗಿದ್ದರೆ ನಾನು ವಿಚಾರ ಮಾಡುವೆನು.

**ಶೆಲುಕ್ಯಸ:**— ಈಗ ನೀವು ವಿಚಾರ ಮಾಡಲು ಅವಕಾಶ ಉಳಿದಿಲ್ಲ. ಇನ್ನೊಂದು ದಿನವಾದರೂ ನೀವು ಅನ್ನ ನೀರುಗಳನ್ನು ಬಿಟ್ಟಿದ್ದಾವರೆ. ನಿಮ್ಮ ಹೊಟ್ಟೆಯಲ್ಲಿ ತಡೆಯಲಾರದ ವೇದನೆ ಪ್ರಾರಂಭವಾಗುವದು. ಆಗ ನನ್ನ ಕೈಮೀರುವದೆಂದು ಹಕೀಮರು ಹೇಳಿದ್ದಾರೆ.

**ಸಿಕಂದರ:**— ನಾನೇನು ಮಾಡಬೇಕೆಂಬುದೇ ತಿಳಿಯದಾಗಿದೆ. ಊಟ ಮಾಡಲು ಮನಸ್ಸೇ ಆಗಲೊಲ್ಲದು.

**ರುಕ್ಸಾನಾ:**— ಮಹಾರಾಜ ! ಪ್ರಯತ್ನ ಮಾಡಿರಿ. ಅನ್ನತ್ತ ಕೂತರೆ ಏನೂ ಆಗುವದಿಲ್ಲ.

**ಸಿಕಂದರ:**— (ನಿಧಾನಿಸಿ) ದೇವರ ಮೇಲೆ ಭರವಸೆ ಇಡಿರಿ. ಅವನು ಎಲ್ಲ ವನ್ನೂ ಸರಿಪಡಿಸುವನು.

**(ಶೆನಿಯಾಸನು ಬಂದು ತಲೆಬಾಗಿ ಶರಣುಮಾಡಿ ನಿಂತುಕೊಳ್ಳುವನು.)**

**ಸಿಕಂದರ.**— ಏನು ವಿಷಯ ?

**ರೆನಿಯಾಸ:**— ಸೈನಿಕರು ತಮ್ಮೊಬ್ಬ ಸಿಪಾಯಿಯನ್ನು ಕಳಿಸಿಕೊಟ್ಟಿದಾರೆ.

**ಸಿಕಂದರ:**— (ಸಿಧಾನವಾಗಿ) ಹಾಜರ ಪಡಿಸು.

(ರೆನಿಯಾಸನು ತಲೆಬಾಗಿ ನಮಸ್ಕರಿಸಿ ಹೊರಟು ಹೋಗುವನು. ಕೆಲ ಸಮಯಗಳಲ್ಲಿ ಒಬ್ಬ ಸಿಪಾಯಿಯು ಶರಬತ್ತಿನ ಒಂದು ಗ್ಲಾಸು ಹಿಡಕೊಂಡು ಬರುವನು. ಮತ್ತು ಸಿಕಂದರನ ಎದುರು ಬಂದು ನಿಂತು ತಲೆಬಾಗಿ ನಮಸ್ಕರಿಸಿ ನಿಂತುಕೊಳ್ಳುವನು

**ಸಿಕಂದರ:**- ಮತ್ತೇನು, ಸೈನಿಕ ?

**ಸಿಪಾಯಿ:**— ಮತ್ತೇನೂ ಇಲ್ಲ ಮಹಾರಾಜ ! ನೀವು ಈ ಶರಬತ್ತು ಕುಡಿದು ಉಪವಾಸ ಮುರಿಯಬೇಕು.

**ಸಿಕಂದರ:**— ಇದನ್ನು ನೀನೊಬ್ಬನೇ ಅನ್ನುವಿಯೋ ?

**ಸಿಪಾಯಿ** - ಇಲ್ಲ, ಎಲ್ಲ ಸೈನಿಕರೂ ಅನ್ನುವರು ಇದೀಗ ಸೈನಿಕರ ಸಭೆ ಕೂಡಿತ್ತು ನಾನು ಅಲ್ಲಿಂದಲೇ ಬಂದೆ. ಅವರೆಲ್ಲರೂ ಕೂಡಿ ತಮ್ಮ ಪರಿಯಿಂದ ನನ್ನನ್ನು ಕಳಿಸಿದ್ದಾರೆ.

**ಸಿಕಂದರ:**— ಏನು ಹೇಳಿ ಕಳಿಸಿದ್ದಾರೆ.

**ಸಿಪಾಯಿ;** ಚಕ್ರವರ್ತಿಗಳು, ಸೈನಿಕರ ಪ್ರಾರ್ಥನೆ ಮನ್ನಿಸಬೇಕು. ಸೈನಿಕರಾದ ನಮ್ಮ ತಪ್ಪನ್ನು ಕ್ಷಮಿಸಿ, ಈ ಶರಬತ್ತು ಕುಡಿದು ಉಪವಾಸ ಮುರಿಯಬೇಕು, ಎಂದು ಕೇಳಿಕೋ ಎಂದು ಹೇಳಿಕಳಿಸಿದ್ದಾರೆ.

**ಸಿಕಂದರ:**- ನಾನು ಉಪವಾಸ ಮುರಿಯದಿದ್ದರೆ ?

**ಸಿಪಾಯಿ:**- ಎಲ್ಲ ಸೈನಿಕರೂ ಅನ್ನನೀರುಗಳನ್ನು ತೊರೆದು. ಈ ತಂಬೂದ ಸುತ್ತಲೂ ಕೂತು ಬಿಡುವರು ಯುನಾನಕ್ಕೂ ಹೋಗುವದಿಲ್ಲ.

**ಶೆಲುಕ್ಕಸ:**- (ಖಿನ್ನ ಮನಸ್ಸಿನಿಂದ) ಮಹಾರಾಜ !

**ರುಕ್ಸಾನಾ:**-(ಕಣ್ಣೀರು ತಂದು) ಆಗ ನಾನೂ ಸೈನಿಕರಲ್ಲಿ ಕೂಡಿಕೊಳ್ಳುವೆನು ನನ್ನ ವಿಚಾರವೂ ಸೈನಿಕರ ವಿಚಾರದಲ್ಲಿ ಕೂಡಿಕೊಂಡಿದೆ.

**ರೆನಿಯಾಸ:**– ಚಕ್ರವರ್ತಿಗಳು, ಸೈನಿಕರ ಈ ಪ್ರಾರ್ಥನೆ ಮನ್ನಿಸಬೇಕು ಇಲ್ಲವಾದರೆ ಯುನಾನ ಸಾಮ್ರಾಜ್ಯವು ಅಳಿದು ಹೋಗುವದು.

**ಸಿಕಂದರ:**—ನಾನೀಗ ಏನು ಮಾಡಬೇಕು ಎನ್ನುವದೇ ತಿಳಿಯದಾಗಿದೆ. ಹೊರಗೆ ಮುಖವೆತ್ತಿ ತಿರುಗದಹಾಗೆ ಆಗಿದೆ ಹೊರಬೀಳಲು ಯಾವ ಮಾರ್ಗವೂ ಉಳಿದಿಲ್ಲ. ನನ್ನ ಸೈನಿಕರೇ ನನಗೆ ಬೆದರಿಸುತ್ತಿದ್ದಾರೆ.

**ಅಂಭಿರಾಜ:**- ಮಹಾರಾಜ! ಅದನ್ನು ಮರೆತು ಬಿಡಿರಿ ಇಂದು ಸೈನಿಕರು ಬೆದರಿಸುವದಿಲ್ಲ ಪ್ರಾರ್ಥಿಸುತ್ತಿದ್ದಾರೆ. ಸೈನಿಕರ ಈ ಪ್ರಾರ್ಥನೆ ಮನ್ನಿಸಲೇಬೇಕು. ಇಲ್ಲವಾದರೆ ನಿಮಗಾಗಿ ನಿಮ್ಮ ದೇಶಕ್ಕಾಗಿ ಕೇಡು ಕಟ್ಟಿಟ್ಟಂತೆ.

**ಸಿಕಂದರ:**-ಅಂದರೆ; ನನ್ನೆಲ್ಲ ಸ್ನೇಹಿತರ ವಿಚಾರವೂ ಹಾಗೆ ಇರುವದೇನು?

**ಎಲ್ಲರೂ:**- (ಸಂತೋಷದಿಂದ) ಹೌದು ಮಹಾರಾಜ!

**ಸಿಕಂದರ:**– ಇಲ್ಲ. ಯಲ್ಲ ಜನರ ಅಭಿಪ್ರಾಯವಿಲ್ಲ, ಈ ಅಭಿಪ್ರಾಯದಲ್ಲಿ ಮಹಾರಾಜ ಪೋರಸನ ಶಬ್ದ ಕೂಡಿಲ್ಲ. ಮಹಾರಾಜ ಪೋರಸರು ಬಂದಿರುವರೇನು? ಹೋಗಿರಿ! ಯಾರಾದರೂ ಹೋಗಿ ಕರೆತನ್ನಿರಿ ನಿಮ್ಮ ಮಿತ್ರ ಅಲೆಕ್ಝಾಂಡರನು ಬೇನೆಯಿಂದ ಬಳಲುತ್ತಿದ್ದಾನೆ. ಅದಕ್ತತೆ ಅವರನ್ನು ಆವರಿಸಿಕೊಂಡಿದೆ. ನಿಮ್ಮನ್ನು ಕರೆಯುತ್ತಾರೆಂದು ಹೇಳು! ಬರದಿದ್ದರೆ ನೋಡಲು ಸಹ ಸಿಗಲಾರರೆಂದು ಹೇಳು!

**ರುಕ್ಸಾನಾ:**-ಅವರಿಗೆ ಅವಮಾನ ಮಾಡಿ ಕಳಿಸಿರುವಿರಿ ಅವರು ಬರಲಿಕ್ಕಿಲ್ಲ!

**ಸಿಕಂದರ:**– ನಿನಗೆ ಗೊತ್ತಿಲ್ಲ. ನೀನು ಅವರನ್ನು ಅರಿತಿಲ್ಲ. ಅವರು ನನ್ನ ನಿಜ ಮಿತ್ರರಿರುವರು. ನನ್ನ ಅಂತಃಕರುಣದ ಆವಾಜ ಕೇಳಿದರೆ ಕ್ಷಣಕಾಲ ನಿಲ್ಲಲಾರರು, ನಿಶ್ಚಯವಾಗಿ ಬರುವರು!

**ಧ್ವನಿ:**– ನಾನು ಬಂದೆ!

(ಪುರುರಾಜನು ಬರುವನು.)

**ಸಿಕಂದರ:**- (ಆನಂದವು ಅತಿರೇಕಗೊಂಡು ನೋಡುವನು) ಪುರರಾಜ! ನೀವು ಬಂದಿರಿ? ನೀವು ಬಂದಿರಿ? (ಏಳಲು ಪ್ರಯತ್ನಿಸುವನು)

**ಪುರು:**- ಏಳ ಬೇಡಿರಿ. ನೀವು ಅಶಕ್ತರಿರುವಿರಿ(ಅಂಭಿರಾಜನನ್ನು ಕುರಿತು) ಅಂಭಿರಾಜ! ಇಲ್ಲಿ ಕೊಡಿರಿ. ತಾಲಿಯನ್ನು (ಶರಬತ್ತಿನ ತಾಲಿ

ತಗೊಂಡು) ತಗೊಳ್ಳಿರಿ, ಮಹಾರಾಜಾ ಅಲೆಂಕ್ಝಂಡರ! ನಿಮ್ಮ ಸೈನಿಕರೂ ನಿಮ್ಮ ಮಿತ್ರರೂ ನೀವು ಜೀವದಿಂದುಳಿಯಬೇಕೆನ್ನುತ್ತಿದ್ದಾರೆ.

(ಸಿಕಂದರನು ಶರಬತ್ತಿನ ತಾಲಿಯನ್ನು ತಗೊಂಡು ಕುಡಿಯುವನು. ಆ ತಾಲಿಯನ್ನು ತಂದ ಸಿಪಾಯಿಯು ಅದನ್ನು ತಗೊಂಡು ಹೊರಗೆ ಹೋಗುವನು)

**ರುಕ್ಸಾನಾ:**- (ಆನಂದ ಅತಿರೇಕಗೊಂಡು ಹುಚ್ಚರಂತೆ) ಅಲೆಕ್ಝಂಡರರಿಗೆ ಜಯವಾಗಲಿ!

**ಎಲ್ಲ ಜನರು:** (ಏಕ ಧ್ವನಿಯಲ್ಲಿ) ಅಲೆಕ್ಝಂಡರರಿಗೆ ಜಯವಾಗಲಿ!

**ಹೊರಗಿನಿಂದ:** ಅಲೆಕ್ಝಂಡರರಿಗೆ ಜಯವಾಗಲಿ!

**ಸಿಪಾಯಿ:**— (ಸಿಧಾನವಾಗಿ) ಮಹಾರಾಜಾ ಪೋರಸರಿಗೆ ಜಯವಾಗಲಿ!

**ಎಲ್ಲರೂ:**- (ಏರುಧ್ವನಿಯಲ್ಲಿ) ಮಹಾರಾಜಾ ಪೋರಸರಿಗೆ ಜಯವಾಗಲಿ!

**ಹೊರಗಿನಿಂದ:**— ಮಹಾರಾಜಾ ಪೋರಸರಿಗೆ ಜಯವಾಗಲಿ!

(ಈ ಪ್ರಕಾರ ಜಯಜಯಕಾರ ನಡೆದಿರುವಾಗ ಪಡದೆ ಬೀಳುವದು)



**ಸಮಾಪ್ತ**

